ಓಂ

ಶ್ರೀಮತ್ಸದ್ಗುರು ರಾಮಾರೂಢರ

# ಕೈವಲ್ಯ ಪದ್ಧತಿ.

ಇದನ್ನು

ಶ್ರೀಮದ್ಗುರು ಸಂಗಮೇಶ್ವರ ಕವಿಗಳಿಂದ ರಚಿಸಲ್ಪಟ್ಟು

ಬಸವಲಿಂಗಯ್ಯಾ ಅಡಿವೆಯ್ಯಾ ಬೆಳಗಲ್ಲ
ಹಿರೇಮಠ ಇವರಿಂದ ಪ್ರಕಟಿಸಲ್ಪಟ್ಟಿತು.



ಮೊದಲನೇ ಆವೃತ್ತಿ ೧೦೦೦ ಪ್ರತಿಗಳು.

ಬಾಗಲಕೋಟ

ಚಂದ್ರಿಕಾ ಪ್ರಿಂಟಿಂಗ್ ವರ್ಕ್ಸ.

ಸನ್ನ ೧೯೨೪.

ಬೆಲೆ: ೧ ರೂ.

[illegible] ಕೈವಲ್ಯ ಪದ್ಧತಿಯ ಮುದ್ರಣಕಾರ್ಯದಲ್ಲಿ ತುಂಬಾ ಸಹಾಯ ಮಾಡಿ
[illegible] ಮ. ರಾ. ರಾ. ಸಂಗಪ್ಪಾ ನಾಗಪ್ಪಾ ಸಕ್ರೋಜಿ
[illegible] ಇವರು ಕೊಟ್ಟದ್ದಕ್ಕಾಗಿ ಅವರ ಉಪಕೃತಿಯನ್ನು
ನಾವು ಸ್ಮರಿಸದೆ ಇರಲಾರೆವು.

ಓಂ

॥ ತತ್ಸತ್ಪರಬ್ರಹ್ಮಣೇ ನಮಃ ॥

# ಗ್ರಂಥಪ್ರಸ್ತಾವನಾ.



ಪ್ರಿಯಬಂಧುಗಳಿರಾ ಸ್ವ ಸ್ವರೂಪ ಜ್ಞಾನವಿಲ್ಲದೆ ಮೋಕ್ಷವ [illegible]ಸಲಾರದೆಂದು ನಕರ್ಮಣಾ ಮುಂತಾದ ವಾಕ್ಯಗಳಿಂದ ಶ್ರುತಿಗ[illegible] ಸಾರಿ ಕೂಗುತ್ತಿರುವವು. ಸಂಸಾರ ಸಾಗರವನ್ನು ದಾಂಟುವದ[illegible] ಶ್ರುತಿಗಳೇ ನೌಕೆಯ ರೂಪವಾಗಿರುವವು. ಈ ಶ್ರುತಿಗಳ ಜ್ಞಾನವನ್ನು ಗುರುಮುಖದಿಂದ ತಿಳಿದು, ಪರಮಾನಂದರೂಪ ಮೋಕ್ಷವ[illegible] ಹೊಂದುವದೇ ಪರಮ ಪುರುಷಾರ್ಥವೆನಿಸುವದು. ಆದರೆ, ಈ [illegible]ಗಳಲ್ಲಿ ಮೋಕ್ಷಕ್ಕೆ ಪರಂಪರಾ ಸಾಧನವಾಗಿಯೂ, ಸಾಕ್ಷಾತ್ಸಾಧ[illegible]ಗಿಯೂ, ಕರ್ಮೋಪಾಸನಜ್ಞಾನಗಳನ್ನು ಬೋಧಿಸುತ್ತಿರುವವು [illegible] ಶ್ರುತಿಗಳ ವಾಕ್ಯಾರ್ಥಗಳನ್ನು ಸಂಸ್ಕೃತ ಜ್ಞಾನವಿಲ್ಲದ ಅಧಿಕಾರಿ[illegible] ಸಮನ್ವಯವಾಗಿ ತಿಳಿಯದೆ ಕಷ್ಟಪಡುತ್ತಿರುವರೆಂಬದನ್ನು ಶಂ[illegible] ಸಾಕ್ಷಾತ್ಶಂಕರಮೂರ್ತಿಯೇ ಶ್ರೀಮನ್ನಿಜಗುಣ ಶಿವಯೋಗಿಗ[illegible] ನಾಮದಿಂದ ಭೂಮಿಯಲ್ಲಿ ಅವತರಿಸಿ ಕೈವಲ್ಯಪದ್ಧತಿ, ಪರಮಾ[illegible], ಪರಮಾನುಭವಬೋಧೆ, ಪರಮಾರ್ಥಪ್ರಕಾಶಿಕೆ, ಅನು[illegible]ಸಾರ, ವಿವೇಕಚಿಂತಾಮಣಿಯೆಂಬ ಷಟ್-ಶಾಸ್ತ್ರಗಳನ್ನು ರಚಿ[illegible]ವರು. ಆ ಷಟ್-ಶಾಸ್ತ್ರಗಳಲ್ಲಿ ಕೈವಲ್ಯಪದ್ಧತಿಯೆಂಬ ಗ್ರಂಥವು ಸ[illegible]ಧಿಕಾರಿಗಳಿಗೆ ಪರಮ ಪ್ರಯೋಜನವಿರುವದರಿಂದ ಇದು ಬಹು [illegible] ಇದಕ್ಕೆ ಕಾರಣವೇನೆಂದರೆ ಇದರಲ್ಲಿ ಕಾಯಕ[illegible] ದೋಷಗಳ ನಿವಾರಣಾರ್ಥವಾಗಿ ಶಿವಗುರು [illegible] ಶಿವಕ್ರಿಯಾಚಾರಸ್ಥಲಗಳು [illegible]

ಯೋಗಪ್ರತಿಪಾದನಸ್ಥಲವೂ ಅದೆ. ಮತ್ತು ಸ್ವರೂಪಾವರಣ ನಿವಾರ
ಣಾರ್ಥವಾಗಿ ಜ್ಞಾನಪ್ರತಿಪಾದನಸ್ಥಲವು ಇರುತ್ತದೆ. ಆದಕಾರಣ ಈ
ಗ್ರಂಥವು ಕನಿಷ್ಟ, ಮಧ್ಯಮ, ಉತ್ತಮ, ತ್ರಿವಿಧ ಅಧಿಕಾರಿಗಳಿಗೂ
ಶ್ರೇಷ್ಠವಾಗಿದೆ. ಆದ್ದರಿಂದಲೇ ಇದು ಸಕಲ ಶಾಸ್ತ್ರ ಶಿಖಾಮಣಿಯೆಂ
ಬದಕ್ಕೆ ಸಂದೇಹವೇನೂ ಇಲ್ಲ. ಇದನ್ನು ಓದುವವರು ಅರ್ಧಮರ್ಧ
ಓದಿದಲ್ಲಿ ಶಾಲಕ ಸಾರಮೇಯ ನ್ಯಾಯದಂತೆ ಪೂರ್ಣ ಅಭಿಪ್ರಾಯ
ವನ್ನು ತಿಳಿಯಲಾರದೆ, ಅನರ್ಥಕ್ಕೆ ಕಾರಣರಾಗುವರು. ಇದನ್ನು ಸ
ದ್ಗುರು ಮುಖದಿಂದ ಪೂರ್ಣಶ್ರವಣಮಾಡಿ ತಿಳಿದಲ್ಲಿ ಮೋಕ್ಷವು ಕ
ರತಲಾಮಲಕವೆನ್ನುವದಕ್ಕೆ ಸಕಲ ಮಹಾತ್ಮರ ಅನುಭವಸಿದ್ಧವಿರು
ತ್ತದೆ. ಆದಾಗ್ಯೂಕೂಡಾ ಈ ಗ್ರಂಥದ ವಾಕ್ಯಾರ್ಥಗಳು ಬಹು ಕಠಿ
ಣವಿರುವದರಿಂದ ಶ್ರೀ ಸರ್ಪಭೂಷಣ ಕವಿಗಳು ಇದಕ್ಕಿಂತಲೂ ಸ
ರಳವಾಗಿ ಕನಿಷ್ಟ ಅಧಿಕಾರಿಗಳಿಗೆ ಬೋಧವಾಗಬೇಕೆಂದು ಕೈವಲ್ಯ
ಕಲ್ಪವಲ್ಲರಿಯೆಂಬ ನಾಮವನ್ನಿಟ್ಟು ಕೈವಲ್ಯಪದ್ಧತಿಯನ್ನು ರಚಿಸಿರು
ವರು. ಇದಾದರೂಸಹ ಅತಿಕನಿಷ್ಟ ಅಧಿಕಾರಿಗಳಿಗೆ ತಿಳಿಯುವದಸಾ
ಧ್ಯವಾಗಿರುವದು. ಆದ್ದರಿಂದಲೇ ನಾನು ಅತಿಕನಿಷ್ಟ ಅಧಿಕಾರಿಗಳೂ
ಸಹ ಉದ್ಧಾರವಾಗಬೇಕೆಂದು ಅತಿ ಸರಳವಾಗಿಯೂ, ಈಗಿನ ಕಾಲ
ಸ್ಥಿತಿಗೆ ಸರಿಯಾಗಿಯೂ, ಮತ್ತು ಶ್ರೀಮನ್ನಿಜಗುಣಾರ್ಯರು ಪದ
ಬಂಧದೊಳು ಪ್ರಾಸಮೊದಲಾದ ಲಕ್ಷಣವಿಲ್ಲದೊಡೇನೆಂದಂತೆ ನಾ
ನಾದರೂ ಇಲ್ಲಿ ವ್ಯಾಕರಣ, ಛಂದಸ್ಸು ನೇಮಗಳಕಡೆಗೆ ವಿಶೇಷ ಲ
ಕ್ಷಗೊಡದೆ, ತಕ್ಕಮಟ್ಟಿಗೆ ಅನುಭವದಕಡೆಗೆ ಲಕ್ಷಗೊಟ್ಟು ಶ್ರೀಮತ್ಸ
ದ್ಗುರು ರಾಮಾರೂಢರ ಪ್ರೇರಣೆ ಹ್ಯಾಗೆ ಇತ್ತೋ ಹಾಗೆ ನನ್ನ ಅಲ್ಪ
ಮತಿಗೆ ಬಂದಷ್ಟು ಅನುಭವಯುಕ್ತಿಗಳನ್ನು ಸೇರಿಸಿ ಈ ಕೈವಲ್ಯವ
ನು ರಚಿಸಿರುತ್ತೇನೆ. ಈ ಗ್ರಂಥದಲ್ಲಿ ಹಸ್ತದೋಷದಿಂದಲೂ, ಅಚ್ಚು
ದೋಷದಿಂದಲೂ, ಪ್ರಮಾದದೋಷದಿಂದಲೂ ಏನಾದರು ತಪ್ಪು
ಬಿದ್ದಿದ್ದರೆ ಬಾಲಕನ ತೊದಲ್ನುಡಿಗಳನ್ನು ಅಪ್ಪಿಕೊಳ್ಳುವ ಪಿತನ ತೆರ
ದಿ ಸಮ್ಯಜ್ಞಾನಿಗಳು ನನ್ನ ತಪ್ಪುಗಳನ್ನು ಅಪ್ಪಿಕೊಂಡು ಹಂಸಕ್ಷೀರ

ನ್ಯಾಯದಂತೆ ಗುಣವನ್ನೇ ಗ್ರಾಹ್ಯಮಾಡಿ ತಪ್ಪುಗಳನ್ನು ಇತ್ತ ಕಡೆ ತಿ
ಳಿಸಿದಲ್ಲಿ ಇನ್ನೊಂದಾವರ್ತಿ ಸರಿಪಡಿಸಿಕೊಳ್ಳುತ್ತೇನೆಂದು ಪ್ರಾರ್ಥಿಸು
ತ್ತೇನೆ. ಈ ಗ್ರಂಥಗಳನ್ನು ಅಪೇಕ್ಷಿಸುವವರು ಈ ಕೆಳಗಿನ ವಿಳಾಸಕ್ಕೆ
ಬರೆದು ತರಿಸಿಕೊಳ್ಳಬೇಕು.

## ಗ್ರಂಥಗಳ ಹೆಸರು.

೧ ಶ್ರೀಮತ್ಸದ್ಗುರು ರಾಮಾರೂಢರ ಕೈವಲ್ಯಪದ್ಧತಿ ೧-೦-೦

೨ ಅಷ್ಟೋತ್ತರಶತನಾಮಾವಳಿ ಮರಾಠಿ ... ೦-೨-೦

೩ ಶ್ರೀ ರಾಮಾರೂಢಸ್ವಾಮಿಗಳವರ ಚರಿತ್ರ ಕಂದಮಾಲಾ ೦-೧-೦

೪ ಕನ್ನಡ ಶ್ರೀ ರಾಮಾರೂಢರ ಅಷ್ಟೋತ್ತರಶತನಾಮಾವಳಿ ೦-೧-೦

ವಿಳಾಸ:— ಶ್ರೀಗುರು ಸಂಗಮೇಶ್ವರಶಾಸ್ತ್ರಿಗಳು
ಮಲ್ಲಾಪೂರ ತಾಲೂಕ: ಬಾಗಲಕೋಟ.
ಜಿಲ್ಹಾ. ವಿಜಾಪೂರ.



ಶ್ರೀ ಮತ್ಸದ್ಗುರು ರಾಮಾರೂಢಾಯನಮಃ

# ಶ್ರೀ ಗುರು ಸಂಗಮೇಶ್ವರ ಶಾಸ್ತ್ರಿಗಳ ಚರಿತ್ರೆ.

ಭೋ ವಾಚಕ ಮಹಾಶಯರೆ ಈ ಗ್ರಂಥಕರ್ತರಾದ ಗುರು ಸಂಗಮೇಶ್ವರ ಶಾಸ್ತ್ರಿಗಳು ಈ ನಮ್ಮ ಕರ್ನಾಟಕ ದೇಶದಲ್ಲಿ ಅಂದರೆ ಜಿಲ್ಹಾ ವಿಜ್ಯಾಪೂರ ತಾಲೂಕ ಬಾಗಲಕೋಟದ ಹತ್ತರಿಕುವ ಮಲ್ಲಾಪುರವೆಂಬ ಊರಲ್ಲಿ ವೀರಶೈವ ಕುರುವಿನ ಶೆಟ್ಟಿಗಳ ವಂಶದಲ್ಲಿ ಚನ್ನವ್ವಾ ಕರಿಸಂಗಪ್ಪಾ ಎಂಬ ಜನನಿ ಜನಕರ ಉದರದಲ್ಲಿ ಇವರ ಜನನವಾಯಿತು. ಜನನವಾದ ನಾಲ್ಕಾರು ತಿಂಗಳಲ್ಲಿ ಇವರ ತಾಯಿಯು ಮೃತಪಟ್ಟಿದ್ದರಿಂದ ಬಹಳ ಕಷ್ಟದಿಂದ ಬಾಲ್ಯಾವಸ್ಥೆಯನ್ನು ಕಳೆದರು ಮುಂದೆ ಐದನೇ ವರುಷಕ್ಕೆ ಇವರ ತಂದೆಯು ಕನ್ನಡ ವಿದ್ಯಾಭ್ಯಾಸಕ್ಕಾಗಿ ಇವರನ್ನು ಸಾಲೆಗೆ ಕಳುಹಿಸಲು ಆ ಸಾಲೆಯಲ್ಲಿ ಎಲ್ಲ ಹುಡುಗರಿಗಿಂತಲೂ ಮೇಲೆನಿಸಿ ಎರಡು ಮೂರು ವರುಷ ವಿದ್ಯೆಕಲಿತ ಬಳಿಕ ಹಳ್ಳಿಯಾದ್ದರಿಂದ ಸಾಲೆಯು ಸ್ಥಿರವಾಗದ ಕಾರಣ ಮನೆಯಲ್ಲಿಯೇ ಕೆಲವು ದಿವಸ ಕಳೆಯಲು ಮುಂದೆ ಇವರ ತಂದೆಯೂ ಮೃತಪಟ್ಟಿದ್ದರಿಂದ ಮನೆಯಲ್ಲಿ ಇವರ ಅಗ್ರಜರಾದ ಸಂಗಪ್ಪಾ ಇವರನ್ನು ನೇಯ್ಯುವ ಉದ್ಯೋಗಕ್ಕೆ ಹಚ್ಚಿದರು. ಈ ಕೆಲಸವನ್ನಾದರೂ ಇವರು ಎರಡು ಮೂರು ತಿಂಗಳಲ್ಲಿಯೇ ಕಲಿತರು ಮುಂದೆ ಕೆಲವು ದಿವಸ ಕಾಲಕಳೆಯಲು ಮಾಘ ಬಹುಳ ಶಿವರಾತ್ರಿಗೆ ಹುಬ್ಬಳ್ಳಿಯ ಶ್ರೀ ಸಿದ್ಧಾರೂಢರ ಜಾತ್ರೆಯು ಬರಲು ಊರೊಳಗಿನ ಕೆಲಜನರು ಆ ಸಿದ್ಧಾರೂಢರ ಜಾತ್ರೆಗೆ ಹೋಗುವದನ್ನು ಕಂಡು ತಾವೂ ಮಹಾ ಸತ್ಪುರುಷರ ದರ್ಶನವಾಗಬೇಕೆಂಬ ಇಚ್ಛೆಯಿಂದ ಜನರ ಸಂಗಡ ತೆರಳಿ ಹುಬ್ಬಳ್ಳಿಗೆ ಹೋಗಿ ಸಚ್ಚಿದಾನಂದ ಸ್ವರೂಪಿಗಳಾದ ಶ್ರೀ ಸಿದ್ಧಾರೂಢ ಮಹಾಸ್ವಾಮಿಗಳ ದರ್ಶನವಾಗಿ ಜಾತ್ರೆ

ಯ ವಿಸ್ತಾರವನ್ನು ನೋಡಿ ಅಲ್ಲಿ ಎರಡು ದಿವಸವಿದ್ದು ಬರುವದಿವ ಸ ಪುಸ್ತಕದ ಅಂಗಡಿಗೆ ಹೋಗಿ ಇಂಗ್ಲೀಷ ಕಲಿಯಬೇಕೆಂಬ ಅ ಪೇಕ್ಷೆಯಿಂದ ಒಂದು ಇಂಗ್ಲಿಷ ಟೀಚರ ಪುಸ್ತಕವನ್ನು ತಕ್ಕೊಂಡು ಊರಿಗೆ ಬಂದ ತರುವಾಯ ಎರಡನೇ ದಿವಸ ಮಲ್ಲಾಪುರದ ಶ್ರೀ ಮಲ್ಲಿಕಾರ್ಜುನ ದೇವಾಲಯದ ಹಿಂಭಾಗದಲ್ಲಿರುವ ಘಟಪ್ರಭೆ ಯು ನದಿಯದಡದಲ್ಲಿ ಸದ್ಗುಣಿಗಳಾದ ವಿಜಾಪುರ ಜಿಲ್ಹೆಯ ಡಿ|| ಪ್ಟಿ. ಫಾರೇಷ್ಟ ಆಫೀಸರರಾದ ಮೆ|| ಕೊಪ್ಪೀಕರ ಸಾಹೇಬರು ಸ್ಥಾ ಪಿಸಲ್ಪಟ್ಟ ಪರ್ಣಕುಟೀರದ ಆಶ್ರಮದಲ್ಲಿ ವಾಸಮಾಡಿರುವ ಶ್ರೀಮ ತ್ಸಕಲ ಕಲಾ ಪ್ರವೀಣ ನಿಖಿಳಶಾಸ್ತ್ರ ವ್ಯಾಖ್ಯಾನಧುರೀಣ ಪಂಡಿತಾ ಗ್ರಗಣ್ಯ ಮುಮುಕ್ಷುಜನ ಶರಣ್ಯ ಮುನಿವರೇಣ್ಯರಾದ ಶ್ರೀ ಸದ್ಗುರು ರಾಮಾರೂಢರದರ್ಶನಕ್ಕೆ ತಮ್ಮ ಊರೊಳಗಿನ ಜನರು ಹೋಗು ವದನ್ನು ಕಂಡು ತಾವೂ ಆ ಜನರ ಸಂಗಡ ತೆಂಗಿನಕಾಯಿ ಕಪ್ಪುರ ತಾವು ಹುಬ್ಬಳ್ಳಿಯಲ್ಲಿ ತಂದ ಇಂಗ್ಲಿಷ ಟೀಚರ ಪುಸ್ತಕ ಸಹಿತ ತಕ್ಕೊಂಡು ಜನರ ಸಂಗಡ ಹೋಗಿ ಆ ಮಹಾತ್ಮರ ದರ್ಶನವಾಗಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಎಲ್ಲ ಜನರು ಕೂತುಕೊಂಡ ಬಳಿಕ ಸ್ವಾಮಿಗಳು ಬಂದ ಯಾವತ್ತೂ ಜನರಿಗೆ ಶಾಸ್ತ್ರಶ್ರವಣ ಮಾ ಡಿದ ಬಳಿಕ ಎಲ್ಲರೂ ಕೂಡಿ ಸ್ವಾಮಿಗಳಿಗೆ ಮಂಗಳಾರ್ತಿಯ ಮಾಡಿ ಅವರಿಂದಾಶೀರ್ವಾದ ಪಡಕೊಂಡು ತಮ್ಮ ಗ್ರಾಮಕ್ಕೆ ತೆರಳಿದರು. ಈ ಮಹಾತ್ಮರು ಮಾತ್ರ ಈ ಸಾಧುಗಳಿಗೆ ಇಂಗ್ಲಿಷ ಬರುತ್ತಿದ್ದರೆ ಹೇಳಿ ಸಿಕೊಳ್ಳಬೇಕೆಂದು ಎಲ್ಲರನ್ನೂ ಹೋಗಬಿಟ್ಟು ತಾವು ಅಲ್ಲೆ ಕೆಲ ಹೊತ್ತು ಕುಳಿತು ಶ್ರೀ ರಾಮಾರೂಢ ಸ್ವಾಮಿಗಳನ್ನು ಕುರಿತುಪ್ರಶ್ನೆ— ಶ್ರೀ ಮಹಾಸ್ವಾಮಿಗಳೇ ತಮಗೆ ಇಂಗ್ಲಿಷವು ಬರುತ್ತಿದ್ದರೆ ನನಗೆ ಕಲಿಸುವವಡೆಂದು ಬಿನ್ನವಿಸಿದರು. ಅದಕ್ಕೆ ಸ್ವಾಮಿಗಳ ಉತ್ತರ— ಇಂಗ್ಲಿಷು ಮರಾಠಿ ಹಿಂದುಸ್ತಾನಿ ಸಂಸ್ಕೃತ ಮೊದಲಾದ ವಿದ್ಯೆಗಳಿಂ ದ ಪರಮ ಪ್ರಯೋಜನವಿಲ್ಲವೆಂದು ಮಹಾತ್ಮರು ಹೇಳಲು ಅದಕ್ಕೆ ಇವರ ಪ್ರಶ್ನೆ—ಹಾಗಾದರೆ ಯಾವವಿದ್ಯೆಯಿಂದ ಪರಮ ಪ್ರಯೋಜ

ಸಡದಿ ದಯುಮಾಡಿ ಹೇಳಿರೆಂದೆನಲು ಕೃಪೆ ತೇಜಸ್ಸು ಶಾಸ್ತ್ರಜ್ಞಾನ
ಗತ್ವವು ಅನಿಚ್ಛೆ ಸುಂದರತ್ವವು ಸಾಮರ್ಥ್ಯವೂ ಸದ್ಗುಣವೂ ಈ ಪರಿಲ
ಕ್ಷಣಗಳುಳ್ಳ ಶ್ರೋತ್ರಿಯ ಬ್ರಹ್ಮನಿಷ್ಠರಾದ ಮಹಾತ್ಮರ ಉತ್ತರ
ಬ್ರಹ್ಮವಿದ್ಯೆಯಿಂದ ಪರಮ ಪ್ರಯೋಜನವದೆಂದು ಹೇಳಲು ಪ್ರಶ್ನೆ
ಆ ಬ್ರಹ್ಮವಿದ್ಯೆವನ್ನೇ ನನಗೆ ಹೇಳಿರೆಂದು ಬೆಸಗೊಳ್ಳಲು ಆದಕ್ಕೆ
ಸ್ವಾಮಿಗಳ ಉತ್ತರ-ತಮ್ಮಾ ಶ್ರೀಗುರುಪದೇಶವಿಲ್ಲದವರಿಗೆ ಅಧ್ಯಾ
ತ್ಮ ವಿದ್ಯೆವನ್ನು ಹೇಳಕೊಡದೆಂದರು. ತಕ್ಷಣವೇ ಗುರುಗಳ ಪಾದಾ
ರವಿಂದ ದ್ವಯುದಸ್ತುತಿ ನಮಸ್ಕಾರ ಮತ್ತು ಅಷ್ಟಾಂಗಾದಿ ಶುಶ್ರೂಷೆ
ಯಿಂದ ರಾಗಾದಿದೋಷರಹಿತವಾದ ಅಂತಃಕರುಣವುಳ್ಳ ಸಾಧ
ನ ಚತುಷ್ಟಯ ಸಂಪನ್ನರಾದ ಗುರುಸಂಗಮೇಶ್ವರ ಪ್ರಶ್ನೆ ಹಾಗಾದರೆ
ಆ ಗುರುಪದೇಶವು ಹ್ಯಾಗೆ ಅದನ್ನು ನನಗೆ ಬೋಧಿಸಿರೆಂದರು.
ಬಳಿಕ ಶ್ರೀಮತ್ಪರಮಹಂಸ ರಾಮಾರೂಢಸ್ವಾಮಿಗಳು ಬಾಲಕರಾದ
ಇವರಿಗೆ ತತ್ವಮಸ್ಯಾದಿ ಮಹಾವಾಕ್ಯಗಳಿಂದ ಆ ಬ್ರಹ್ಮವೇ ನೀನು.
ನೀನೇ ಆ ಬ್ರಹ್ಮವು ಎಂದು ಉಪದೇಶಿಸಲು ಸತ್ಪುರುಷರ ಸ್ತೋಮವು
ಜಯ ಜಯಾಕಾರ ಮಾಡಲ್ಪಟ್ಟಿತು. ಆ ಕ್ಷಣವೆ ಈಗುರುಸಂಗಮೇಶ್ವರ
ಶಾಸ್ತ್ರಿಗಳು ಮನ್ನಾಥಾ ಶ್ರೀಜಗನ್ನಾಥಾ ಮದ್ಗುರು ಶ್ರೀಜಗದ್ಗುರು ಎಂ
ದುಸ್ತುತಿಸಿಮಹದಾನಂದವನ್ನುಹೊಂದಿದರು. ಇತ್ತ ನಿತ್ಯಗುರುಸನ್ನಿಧಿ
ಗೆ ಹೋಗಿ ಶಾಸ್ತ್ರಾಭ್ಯಾಸ ಮಾಡುತ್ತ ಕೆಲವುದಿವಸಗಳಲ್ಲಿ ವೇದಾಂತ
ಶಾಸ್ತ್ರದ ಪ್ರಮಾಣಗತ ಪ್ರಮೇಯಗತ ವಿಪರೀತ ಭಾವನೆಗಳ ನಿವಾ
ರಣಗೋಸುಗ ಶ್ರವಣ ಮನನನಿಧಿ ಧ್ಯಾಸನವಾಗಲು ಆಚಾರ್ಯೋ
ಪದೇಶದಿಂದ ಅತ್ಯುತ್ಕೃಷ್ಟವಾದ ಪರಬ್ರಹ್ಮವೇ ತನ್ನ ಸ್ವರೂಪವೆಂದು
ನಿಶ್ಚೈಸಿದ ಧೃಡಾಪರೋಕ್ಷನು ಭವಿಗಳಾದ ಈ ಮಹಾತ್ಮರ್‍ಗೆ
ಲೋಕೋದ್ಧಾರಾರ್ಥವಾಗಿಯೂ ನವೀನವಾಗಿಯೂ ಸರಳವಾಗಿ
ಯೂ ವೇದ ವೇದಾಂತ ಶಾಸ್ತ್ರಗಳನುಮತಿಯಾಗಿಯೂ ಪಂಚಸ್ಥಲ
ದಿಂ ಕೂಡಿದ ಕೈವಲ್ಯ ಪದ್ಧತಿಯನ್ನು ರಚಿಸಿರುವರು. ಈ ಮಹಾತ್ಮ
ರ ಗುಣಗಳವರ್ಣನೆಯನ್ನು ನನ್ನ ಅಲ್ಪ ಮತಿಗೆ ತಿಳಿದಷ್ಟು ವರ್ಣಿಸು

ತ್ತೇನೆ. ಸಾಧನ ಚತುಷ್ಟಯ ಸಂಪನ್ನರೂ ಬ್ರಹ್ಮವಿದ್ಯೆಪರಿಪೂರ್ಣ ರೂ, ಸತ್ಯನಿಷ್ಠರೂ, ದಯಾಳುಗಳೂ, ಸಾತ್ವಿಕರೂ, ಶಾಂತಿಯುಳ್ಳ ವರೂ, ಸ್ವರೂಪ ತೇಜಸ್ವಿಗಳೂ, ಆಧ್ಯಾತ್ಮವಿದ್ಯೆಪಕ್ಷಪಾತಿಗಳೂ, ಲೋಕೋದ್ಧಾರಕರೂ, ಇನ್ನೂ ಎಷ್ಟೋ ಗುಣಗಳು ಇವರಲ್ಲಿ ಮನೆ ಮಾಡಿಕೊಂಡಿರುವವು. ಈ ಯಾವತ್ತೂ ಗುಣಗಳಿರಬೇಕಾದರೆ ಕೋಟಿಜನ್ಮದ ಪುಣ್ಯದಿಂದಲ್ಲದೆ ಅನ್ಯಥಾ ಆಗದು ಇದಂತೂ ಇರಲಿ ಇವರ ವಯಸ್ಸನ್ನು ನೋಡಿದರೆ ಈಗ ಸದ್ಯ:ಕಾಲಕ್ಕೆ ೧೯|೨೦ ವರುಷಗಳಿವೆ. ಆದರೆ ಈ ವಯಸ್ಸಿನಲ್ಲಿ ಗ್ರಹಸ್ತಾಶ್ರಮಿಗಳಿದ್ದು ಕಾಮ ಕ್ರೋಧಾದಿಗಳನ್ನು ಜೈಸಿ ಸಾಧನ ಚತುಷ್ಟಯ ಸಂಪನ್ನರಾಗಿ ಬ್ರಹ್ಮವಿದ್ಯೆವನ್ನು ಪ್ರಾಪ್ತಮಾಡಿಕೊಳ್ಳಬೇಕಾದರೆ ಸಾಮಾನ್ಯವೇ ಆದಕಾರಣ ಇವರಿಗೆ ಪರಮಜ್ಞಾನಿಗಳೆಂದು ಅನ್ನಲಿಕ್ಕೆ ಅಡ್ಡಿಯೇ ಇಲ್ಲವೆಂದು ನನ್ನ ಸ್ವಂತ ಅನುಭವದ ಚರಿತ್ರವನ್ನೇ ತಿಳಿದಷ್ಟು ಬರೆದಿರುತ್ತೇನೆ.

ತಮ್ಮ ವಿಧೇಯ,

**ಬಸಲಿಂಗಯ್ಯಾ ಅಡಿವೆಯ್ಯಾ**

**ಬೆಳಗಲ್ಲ ಹಿರೇಮಠದ**

ಶಾಳಾಮಾಸ್ತರ ಮುಲ್ಲಾಪೂರ.



ಶ್ರೀಮತ್ಸದ್ಗುರು ರಾಮಾರೂಢಾ ಯನಮಃ

# ಕೈವಲ್ಯ ಪದ್ಧತಿಯು.

## ಶಿವ ಕಾರುಣ್ಯಸ್ಥಲ.

### ೧ ನೇ ಪದ.

( ದಾಟಿ—ಶ್ರೀಗುರುವೆಂದೆಂಬ ವೈದ್ಯನೆನ್ನಯಭಯು, ಎಂಬಂತೆ )

ಶ್ರೀಗುರು ಶಿವನೆ ಕರುಣದಿಂದಲೆನಗೆ। ಈಗಲೆ ನಿಜಸುಖವ ನ್ನಿತ್ತು ರಕ್ಷಿಸೈ॥ ಪ॥ ಅಕಲಂಕ ಸದ್ಗುಣ ಮಣಿಗಣ ಸಾಂದ್ರ। ಸಕಲ ವಿಭುದರಿಂ ಶ್ರುತಿಪಯೋಗೇಂದ್ರ॥ ಯುಕುತಿ ಅನುಭವಗಳಿಗೆ ಕೈರವಚಂದ್ರ। ನಿಕರವನಿರಿಸೆನ್ನ ಮನದಲಿ ಭಕ್ತಿಗಳ॥ ೧॥ ಚತು ರಾನನ ಮಧು ರಿಪು ವಂದಿಪ ಗಾತ್ರ। ಅತಿ ಪೃಥು ಋಷಿಗಳ ಸುವಿ ವೇಕ ಸೂತ್ರ॥ ಶತಮುಖಾದಿಗಳು ಸ್ತುತಿಪ ಸುಚರಿತ್ರ। ಸತತ ಭವದಂಘ್ರಿಯಲಿರ್ಪ ಮನದತ್ರ॥ ೨॥ ಅನಘ ಆಚಾರ ಸತ್ವಗುಣ ಶೀಲಾ। ವಿನುತ ಸುಗುಣಿಗಳಿಗತಿಶಯ ಲೋಲಾ॥ ಅನಾರ ಶಂಜಿತ ಮಕರಧ್ವಜನ ಶರ। ಅನನ್ಯಜಾದಿ ರಿಪುಗಳ ದಹಿಸೆನ್ನ॥ ೩॥ ಶಾಂತಿ ಯೊಳು ತಾರಾಪನ ಪ್ರಭಾರೂಪ। ಕಾಂತಿಯೊಳು ಜಗಚ್ಚಕ್ಷುವಿನ ರೂಪ॥ ಸಂತಸದಿ ಯೋಗದೊಳೈಕ್ಯನಾದವನೆ। ಸಂತತ ತವಪದ ದಲ್ಲಿ ಬೆರೆಸು ಮಮ॥ ೪॥ ದುರಿತ ಜ್ಞಾನಕೆ ರುದ್ರನೆನಿಸಿದವನೆ। ಪರಮ ವೇದಾಂತಸಾರವ ಬೋಧಿಸನೆ॥ ಗುರು ರಾಮಾರೂಢನೆ ಕ್ಷಯಿಸೆನ್ನಯಮರವಿ। ಪರಿಪೂರ್ಣಸುಖದೊಳು ನಿಲ್ಲಿಸವಿರತಂ॥೫॥

### ೨ ನೇ ಪದ.

( ದಾಟಿ—ಶ್ರೀಗುರು ವಚನುಪದೇಶವ ಲಾಲಿಸಿ, ಎಂಬಂತೆ )

ನಿರುತ ವಂದಿಸುವೆನಾ ತ್ರಿಮೂರ್ತಿಗಳಿಗೆ। ನಿರುಪಮ ದತ್ತಾ ತ್ರೇಯವತಾರವಾದ॥ ಪ॥ ಜಗವನುದ್ಧರಿಸುವದಕ್ಕೋಸ್ಕರವಾಗಿ। ನಿಮಗ ಸಾರವ ಹಿಡಿದೀಶಾಂಶದಿಂಪುಟ್ಟಿ। ಅಗಣಿತೈಶ್ವರ್ಯದಿಂ ಮೆರೆವ ಸಿದ್ಧಾರೂಢಗೆ। ಸುಗುಣ ಸುಶೀಲವ ಕೊಟ್ಟು ರಕ್ಷಿಸಲೆಂದು

|| ೧ || ಸತ್ತುಚಿತ್ತಾನಂದದೊಳು ಮಗ್ನವಾಗಿ | ಉತ್ತಮಧಿಕಾರಿಯು ಪ್ರಿಯನಾಗಿ ಮೆರೆದ || ಚತ್ವಾರಿ ಮುಖನಾಂಶ ಷಣ್ಮುಖಾರೂಢಗೆ | ಸತ್ಯಜ್ಞಾನದೊಳು ಮುಳುಗಿಸಲೆಂದು || ೨ || ಪರಮ ವೈರಾಗ್ಯದಿಂ ಮೆರೆಯುತ ಸುಜನರ | ಪರಿಪಾಲಿಸುವದಕ್ಕಾಗಿ ಜಗದೊಳು | ಹರಿಯೊಂಶದಿಂವುಟ್ಟಿದಾ ರೂಢರಾಮಗೆ | ನಿರುತ ಬ್ರಹ್ಮಾನಂದ ದೊಳು ಬೆರಸಲೆಂದು || ೩ ||

೩ ನೇ ಪದ.

( ದಾಟಿ—ಉಪವನದ ಶೋಭೆಯ ನೀಕ್ಷಿಸಿ ಮನದಿ ಎಂಬಂತೆ )

ರಾಮಾರೂಢರ ನಾಮವ ಪ್ರೇಮದಿಂ ಸ್ಮರಿಸಲು | ನೇಮದಿಂ ಮೋಕ್ಷಹುದಾಗಲಿ || ಪ || ಸೋಮಪ್ರಕಾಶದಂತಾ ಮಹಾಶಾಂತಿಯು | ಸ್ವಾಮಿಹೃದಯ ಕೋಮಲಾಮೃತ || ೧ || ಕಾಮಸಿಲ್ಲದಮುಹಿ ಸ್ತ್ರೋಮದಿಂ ಪುಣ್ಯದ ಧಾಮ ಬೋಧಾನಂ ದೊರೆಯುವ || ೨ || ಸಾಮವೇದಾದಿ ಸ್ತುತ್ಯ | ನಾಮುಮುಕ್ಷುಗಳ | ಆಮೋದದಿಂದಿಹ ಕಾ ರಾಮಾ || ೩ ||

೪ ನೇ ಪದ.

( ದಾಟಿ—ಬೋಧಿಸೆನ್ನನು ಗುರುವೆ, ಎಂಬತೆ. )

ದೇವರ ದೇವನಾದ ಗುರುವರನೆನ್ನ | ಪಾವನಾತ್ಮನ ಮಾಡಿದಾ || ಓವಿನಿಜಾನುಭವವನೆ ಪೇಳೆನಗೆ| ಕೇವಲಾ ಬ್ರಮ್ಮಮೂರ್ತಿಯೆ ನೀನೆಂದರುಹಿ || ಪ || ತನುವಿಂದ್ರಿ ಪ್ರಾಣಗಳು | ನೀನಲ್ಲವು | ಮನಸು ಚಿತ್ತಾದಿಗಳು || ಅನಲಾನಿಲವ್ಯೋಮವಾರಿ ಮೇದಿನಿಗಳು ಇನಿತು ನೀನಲ್ಲವು ವೇದ್ಯವೆಂದು ತಿಳುಹಿ || ೧ || ಗುಣತ್ರಿ ಮಹತ ತ್ವಾದಿಗಳನೋರಂ| ತೆಣಿಸಲು ನೀನಲ್ಲವು || ಗುಣವೊಂದು ನೀನಲ್ಲ ಹವರ ಧರ್ಮಕರ್ಮ | ಅಣುಗನೆ ನೀನವಕೆ ಸಾಕ್ಷಿಯೆಂದು ಪೇಳ್ದ || ೨ || ಪರಮಜೀವವಿಶ್ವತೈ | ಜಸಪ್ರಾಜ್ಞ | ತುರಿಯ ವಿಷಯಗಳು ಪರಮ ದೃಕ್ಕುವೆನೀನಲ್ಲವೆಂದು ಪರ | ತರದೃಶಿವಮಾತ್ರಾರೂಢ ರಾಮ ನೀನೆಂದು || ೩ ||

೫ ನೇ ಪದ.

( ದಾಟಿ—ಶ್ರೀಗುರು ಸಿದ್ಧಾರೂಢ ಸಮರ್ಥಾ ಬೆಳಗುವೆ ನಾರುತಿಯಾ, )

ಶ್ರೀಗುರು ಮಹಾದೇವ | ಯೋಗಿಶಿವ | ಶ್ರೀಗುರು ಮಹಾದೇವ || ಶ್ರೀಗುರುದಕ್ಷಿಣ ಮೂರ್ತಿ ನಿರ್ಗುಣವ | ಶ್ರೀಗುರುಮಹಾದೇವ || ಪ || ಭೋಗರಾಗತ್ಯಾಗ ವಿರಾಗಿ ಯನುಭವ ಬೇಗ ಮುಕ್ತಿಯ ನೀವ ಯೋಗಿ ಶಿವಬೇಗ ಮುಕ್ತಿಯ ನೀವ ಯೋಗಾನಂದದಿ ಐಕ್ಯವನಾಗೆಂದು ನೀಗಿಸಿದನು ಭವ || ೧ || ಪ್ರಣವ ಪರಾತ್ಪರ ನನಘನ ದ್ವಯಭಾವ | ಕಾಣಿಸು ಓಂ ಪ್ರಣವ | ಯೋಗಿಶಿವ | ಕಾಣಿಸು ಓಂ ಪ್ರಣವ | ಅಣು ರೇಣು ತೃಣ ಕಾಷ್ಟಾದಿಗಳೊಳು | ಮಾಣದಿಹನ ಭವ || ೨ || ತ್ರಯಮೂರ್ತಿ ಬ್ರಮ್ಹಾದಿ ವಂದ್ಯವ | ಮಾಯ ಮಿಥ್ಯವಾಭಾವ | ಯೋಗಿಶಿವ | ಮಾಯ ಮಿಥ್ಯವಾಭಾವ | ಭಯರಹಿತ ಭಕ್ತರ ಭಾಗ್ಯದ ನಿಧಿದಯಾ ಪರಮನಿರುವ | ಯೋಗಿ ಶಿವ || ೩ || ಸಚ್ಚಿದಾನಂದ ನಿತ್ಯಪೂರ್ಣ ತವ | ಅಚ್ಯುತ ಜ್ಞಾನನುಭವ | ಯೋಗಿ ಶಿವ ಅಚ್ಯುತ ಜ್ಞಾನನುಭವ | ನಿಶ್ಚಯ ನಿರ್ಮಲ ಬೋಧಿಸಿ ಯನ್ನನು | ಸ್ವಚ್ಛವ ಮಾಡಿರುವ | ಯೋಗಿ ಶಿವ || ೪ || ಬಹುಮತ ಖಂಡ್ರಿಸಿ ತತ್ತ್ವಂಪದೈಕ್ಯವ | ಸಹಜವಾತ್ಮಸ್ಥಿರವ | ಯೋಗಿ ಶಿವ | ಸಹಜವಾತ್ಮಸ್ಥಿರವ | ಸೋಹಂ ಭಾವಾರೂಢ ದಾಮಪರ | ಮಹಂ ಬ್ರಹ್ಮ ಗುರುವ | ಯೋಗಿ ಶಿವ || ೫ ||

೬ ನೇ ಪದ.

( ದಾಟಿ—ಶ್ರೀಜಗದಂಬಾ ಕಾಂತ ಬಲಾಹಿತ, ಎಂಬತೆ )

ಶ್ರೀಗುರುದೇವನ ನಿರ್ಗುಣರೂಪನ | ಬೇಗದಿ ಭಜಿಸುವೆ ವೃವಿನಯದಿನಾವ್ || ಯೋಗವಮಿಂದ ನಿರ್ವಿಕಲ್ಪನ | ಅಗಮ ಸ್ತುತ್ಯನ ನಿಗಮಗೋಚರನ || ಪ || ಅಕಲಂಕಾದ್ವಯ ನಿತ್ಯಾಸಂಗನ | ಸಕಲ ಜೀವಕಾಧಾರವಾದವನ || ಯುಕುತಿಗೆ ಮಿಂದ ನಿರ್ವಿಕಾರನ | ಅಕಲಂಕ ಮನದಿ ಭಜಿಸುವೆವ್ವನಾವ್ || ೧ || ನಿರವಧಿ ನಿರ್ಮಲ ನಿಷ್ಕೃಪ ನಿರಘನ | ಪರಮಾನಂದನ ಸತ್ಯಚಿದ್ರೂಪನ || ನಿರುಪಮ ಸ್ವ

ಯಂ ಪ್ರಕಾಶಮಾನನ | ನಿರುತದಿ ಭಕ್ತಿಲಿ ಭಜಿಸುವೆವುನಾವ್ ||೨||
ಆದಿ ಮಧ್ಯಾಂತವುಕ್ತ ಸ್ವರೂಪನ| ವಾದವೇದ ಕಶೀತನಾದವನ ||
ಸಾದರ ಬೋಧ ಶ್ರೀರಾಮಾರೂಢನ | ಆದರದಿಂದಲಿ ಭಜಿಸುವೆವು
ನಾವ್ || ೩ ||

೭ ನೇ ಪದ.

(ದಾಟ— ಆರೇನು ಮಾಡುವರು ಆರಿಂದ ಲೇನಹುದು, ಎಂಬಂತೆ)

ಗುರುವರನೆ ನಿನಗಿಂತ ಧಿಕರಾರುಂಟು | ಅರಿತು ನೋಡಲ ಲ್ಲಕೂ ನೀನೆ ಪರತರನು || ಪ || ನೀನೆ ಶರಧಿಯು ಮಹತತ್ವಾದಿ ಗುರುಳಿಗೆ| ನೀನೆ ಮೊದಲು ಕಡೆ ರಹಿತನಾದವನು || ನೀನೆ ವಿವಸ್ವ ತಕುಮುದ ಬಾಂಧವರಿಗೆ | ಉನ್ನತ ತೇಜನಿತ್ತು ಶ್ರೇಷ್ಠರೆನಿಸಿದಿ ||೧|| ಸುರ ನರರು ಮುನಿಮುನಿ ದನುಜರುಗಳೀಗ | ಇರುಳು ಹಗಲು ಕೂಡಿ ನಿನ್ನ ಭಜಿಸುವರು || ಹರನೆ ನಿನ್ನಯ ಚರಣ ಸರ್ವಕ್ಕೂ ಶ್ರೇಷ್ಠವು | ಪರನೆಂದು ನೆನೆದಗೆ ಸರಸಿರುಹ ಮಿತ್ರ || ೨ || ಅಣಿಮಾದಿಸಿದ್ಧಿ ಮಣಿಗಳಿಗೆ ಸಾಗರ | ತಣುವಿನ ಸ್ಥಾನನೀ ಪ್ರಣವದ ಮೂಲ | ಎಣಿಕೆಗೆ ಮೀರಿದವ ಕರುಣಾರಸ ನೇತ್ರನು | ಖಣಿರೂಪ ಮುಕುತಿಗಾರೂಢ ರಾಮನೀ || ೩ ||

೮ ನೇ ಪದ.

(ದಾಟ—ನೀನೊಲಿಯುದ ನಿಮುಷ ಪಲವುವರುಷ, ಎಂಬಂತೆ)

ಗುರುದೇವ ನಿನ್ನನಾನೇನಂತ ವರ್ಣಿಸಲಿ | ಅರಿಯದೆ ನಾನು ನಿನ್ನ ಮಹಿಮೆಗಳ || ಪ || ನಿನ್ನಾಜ್ಞೆಯಿಂದಲೆ ಬ್ರಮ್ಹ ರುದ್ರಾದಿಗಳು | ಚನ್ನಾಗಿ ಸೃಷ್ಟ್ಯಾದಿ ಕರ್ತವ್ಯ ಕರ್ತರೆಂದು || ಮುನ್ನಾಗಿಶೃತಿ ಸಾರುವದು ಕೇಳಿ ನಾನು | ಸನ್ನುತ ಸ್ವಯಂಪ್ರಕಾಶ ಮಾನನಾದ || ೧ || ನಿನ್ನ ಭಾಸಾಂಶದಿಂ ಸೂರ್ಯ ಚಂದ್ರಾದಿಗಳು | ಸನ್ನುತದಿಂದಲಿ ಪ್ರಕಾಶಿಸುವರೆಂದು || ನಿನ್ನಲೇಶದಿಂದ ದೇವೇಂದ್ರ ಮೊದಲಾದ | ಉನ್ನತ ನಿರ್ಜರಾಳಿರುವದೆಂದು ಕೇಳಿ || ೨ || ನಿನ್ನೊಳಗೊಳನಂತಕೋಟಿ ಭವಾಂಡಗಳು | ನಿನ್ನ ಭಾಸಾಂಶದಿಂ ಅನಲಾನಿಲಗ

೪ || ನಿನ್ನ ತ್ರುಟಿಗೆ ಶತ ಕಲ್ಪಗಳಲ್ಲವೆಂದು | ಉನ್ನತಾರೂಢ ರಾವ
ನವಾಚ್ಯನೆಂದು ಕೇಳಿ || ೩ ||

೯ನೇ ಪದ.

( ದಾಟಿ—ಏಳುಮಾತಿನ ಗಿಣಿಯೆ, ಎಂಬಂತೆ )

ಉತ್ಥಾನವಾಗೊ ದೇವಾ ಸತ್ಯಾನಂದದ ಭಾವಾ | ಮೃತ್ಯುರ
ಹಿತಭವಾ ಭೃತ್ಯರನೀಕ್ಷಿಸುತ || ಪ || ನಿತ್ಯನಿರ್ಮಲನೆ ಉದ್ಭವ ರಹಿ
ತನೆ | ಶೃತ್ಯಾದಗೋಚರನೆ ಪ್ರತ್ಯಗಾತ್ಮನೆ || ಅತಲ ವಿತಲಾದಿ ಸಪ್ತ
ಲೋಕದ ಜನರು | ಕೃತ ಕೃತ್ಯರಾಗುವರು ನಿನ್ನ ಕೃಪೆಯಿಂದ ||೧||
ನಿರುಪಮ ನಿರಘ ನಿರವಯುವ ನಿಸ್ಸಂಗ | ನಿರುಪಾಧಿ ನಿರಾವರಣ
ನಿಷ್ಕ್ರಿಯ ವಂತನೆ || ಸುರರು ನರರು ಇಂದ್ರಾದಿ ಮುನಿಗಳು | ಉರಗ
ಕಂಕಣ ನಿನ್ನ ಸ್ಮರಣೆ ಮಾಡುವರು || ೨ || ಸರ್ವದಾಯಕನಾದ ಸ
ರ್ವನಾಯಕನಾದ | ಸರ್ವಜನರ ಹೃದಯದೊಳಿರುವವನೆ || ಸರ್ವ
ಶೀಕ್ಷಕನಾದ ಸರ್ವಸಾಕ್ಷಿಯಾದ | ಸರ್ವರು ಭವದಂಘ್ರಿ ಅರ್ಚನೆ
ಗೈವರು || ೩ || ಪಂಚವದನನೆ ಪಂಚಲಕ್ಷಣನೆ | ಪಂಚಕೊಶಾತೀತ
ಭವನೆ ನೀನು || ಸಂಚಿತ ಕರ್ಮನಾಶಾ ಪಂಚಶರನಾಶಾ | ಸಂಚೈಸಿ
ದ ಜನರ ಕಲುಷ ಹರಿಸುವನೆ || ೪ || ಅಷ್ಟ ಮದನಾಶಾ ಅಷ್ಟಾನಂ
ದವಾಸಾ | ಇಷ್ಟವದಾತನೆ ಕಾಮಿತಜನರ || ಸೃಷ್ಟಿಯೊಳಗೆ ನೀನು
ಶ್ರೇಷ್ಟನಾಗಿಮೆರೆದ| ಶಿಷ್ಟರಾಮಾರೂಢಾ ಉತ್ಥಾನವಾಗು || ೫ ||

೧೦ ನೇ ಪದ.

( ದಾಟಿ—ರಾಮಚಂದ್ರ ಶ್ರೀರಘುವರಪಾಹಿ, ಎಂಬಂತೆ )

ರಕ್ಷಿಸೆನ್ನ ಶ್ರೀಗುರುವರ ದೇವಾ ಮಹಾದೇವಾ || ಪ || ಕಾಯ
ಮಾಯಮೋಹದಿ | ನೋಯಲಾರೆ || ಮಾಯಯತ್ಯಜಿಸಿದ |
ಕಾಯದೂರಶಿವ || ೧ || ಬಾಲನೀ ಶೂಲಿಪರಮ | ಫಾಲನೇತ್ರಾ ||
ನೀಲಲೋಚನನಾದ | ಕಾಲ ಕಾಲ ನೀನು || ೨ || ಶೂರನೀಧೀರ
ಪರಮ | ಕರ್ಮನಾಶಾ || ಮರವಿನಾಶಕನಾದ ಶ್ರೀರಾಮಾ
ರೂಢ || ೩ ||

## ೧೧ ನೇ ಪದ.

( ದಾಟಿ—ವಾಲಯಫಣಿ ಭೂಷಣ, ಎಂಬಂತೆ )

ಪೊರೆಯೊನೀದಯಾ ನಿಧಿ | ಸುರನತ ಚರಣ | ನೆರಗುವೆ ನಾ ನಿನಗೆ | ಮರವಿ ನಾಶಕನಾದ ಶ್ರೀಗುರು | ಪರಮರೂಪೆಂದು ಶೃತಿಯ ನಿಚಯ | ಒರೆಯುತಿರುವದ ನಾನು ಕೇಳಿ | ಹರನೆ ನಿನ್ನಯ ಬೇಡಿಕೊಂಬೆ ||ಪ|| ಬಳಲಲಾರೆನೊದೇವ | ಮಳಲ ರೂಪದಿಂದ | ಹೊಳೆಯುತಿರುವ ಭವದಿ | ತೊಳಲಿ ನಾನತಿ ಶ್ರಮವ ಪೊಂದಿದೆ | ಇಳೆಯೊಳಗೆ ಶ್ರೇಷ್ಠನಾದ ಗುರುರಾಯು | ತಿಳಿದು ಯನ್ನಯ ಭವದ ದುಃಖವ | ಅಳಿದು ಬಿಡು ಎಂದು ಬೇಡಿಕೊಂಬೆನಾ || ೧ || ಇಷ್ಟವಲ್ಲದ ವಿಷಯಕೆ | ಕಷ್ಟಪಟ್ಟು ನಾನು | ದುಷ್ಟನಾಗುವದು ಕಂಡು | ಸೃಷ್ಟಿಗೊಡಿಯನಾದ ಗುರುದೇವ | ಕಷ್ಟರೂಪವ ಬಿಡಿಸೆನ್ನನೀಗ ಇಷ್ಟದೊಳು ನೆರೆ ಬಿಡದೆ ಕೂಡಿಸೆಂದು | ಅಷ್ಟಮದ ನಾಶಾ ನಿನಗೆ | ಬೇಡಿಕೊಂಬೆ || ೨ || ತನುಮನಸಾದಿಗಳು | ಇನಿತೆಲ್ಲಕೂಡಿ ನನ್ನ | ಶುನಕನಂದದಿ ಮಾಡುವವು || ಅನಘರೂಪ ಗುರುದೇವ ನೀನಿಂಥ | ಮನದ ಕಷ್ಟವ ಬಿನದಿ ಲಾಲಿಸಿ | ವಿನುತ ಸುಖದೊಳೆನ್ನ ಬೆರಸೆಂದು | ಜನಕನಾದ ರಾಮಾರೂಢ ಬೇಡಿಕೊಂಬೆ || ೩ ||

## ೧೨ ನೇ ಪದ.

( ದಾಟಿ— ಸುಮ್ಮನಿರು ಬ್ರಹ್ಮಸ್ವರೂಪದಲ್ಲಿ, ಎಂಬಂತೆ )

ಅರ್ಚಿಸುವಾ ಸೋಹಂ ಭಾವಗೆ ನಾವು || ಪ || ನದಿಯೊಳಗಿಂದ ಉದಕವತಂದು | ಚಂದದಿಂದ || ೧ || ಮೃಡನಪಾದ | ಒಡನೆ ತೊಳೆದು | ತೊಡೆದು ಗಂಧಾದಿ || ೨ || ಮಲ್ಲಿಗಿ ದಾಶಾಳ | ಗುಲಾಬಿ ಪುಷ್ಪಗಳ | ಅಲಂಕಾರದಿಂದಲಿ || ೩ || ಮುಕ್ತಿನಾರತಿ | ಎತ್ತಿ ಬೆಳಗುತ ಅತ್ತಿತ್ತ ನೋಡದಿತ್ತ || ೪ || ಪೊರೆಯನುತೀಗ | ವರ ಶಿವಯೋಗಿ | ಗುರು ರಾಮಾರೂಢಗೆ | ಅರ್ಚಿಸುವ || ೫ ||

## ೧೩ ನೇ ಪದ.

( ದಾಟಿ—ಚಿಕ್ಕಮಕ್ಕಳಿ ಕೇಳಿರಯ್ಯಾ, ಎಂಬಂತೆ )

ಬೆಳಗುವೆ ನಾರತಿಯ ನೆತ್ತಿ | ನಾನು | ಪೊಳೆಯುವ ಪರೆತರ ಬ್ರಮ್ಹ ಮೂರ್ತಿಗೆ || ಪ || ಪಂಚವಿಂಶತಿ ತತ್ವಾದಿಗಳಂ | ಒಳ್ಳೆ | ಹಂಚಿಕೆಯಿಂದಲಿ ವಿಯದ್ವ್ಯಾದಿಗರ್ಪಿಸಿ || ಸಂಚಿತಾಗಾಮಿ ಕರ್ಮ ನಶಿಸಿ | ಮಹಾ ಆಂಜನಡಗಿಯಲಿ ಸಂಚರಿಸುವವಗೆ || ೧ || ಸತ್ತುಚಿತ್ತಾನಂದ ನಿತ್ಯ | ಪೂರ್ಣ | ಪತ್ಯಗಾತ್ಮನನರಿದ ಮಹಾನುಭವಗೆ || ಸತ್ಯಸಹಜಾನಂದ ಶರಧಿ | ಯೊಳು | ನಿತ್ಯದಿ ಮಗ್ನವಾಗಿರುವಾತನಿಗೆ || ೨ || ವರಏಕಮೇವಾದ್ವಿತಿಯಂ | ಬ್ರಮ್ಹ | ಪರವೆಂದನೇಕ ಮತಗಳ ಖಂಡ್ರಿಸಿ || ಅರುವೆ ನೀನೆಂದು ಪೇಳಿದ | ನಮ್ಮ | ಗುರು ರಾಮಾರೂಢಗೆ ಮಂಗಲದಿಂದ || ೩ ||

## ೧೪ ನೇ ಪದ.

( ದಾಟಿ—ವಿಮಲ ಶ್ರೀಜಗನ್ನಾಥನಾ, ಎಂಬಂತೆ. )

ಸುಜನ ಪ್ರೇಮ ದೀಕ್ಷಕಾ | ಕುಜನ ಕೋಪ ಶೀಕ್ಷಕಾ ಅಜರ ಅಮರ ಪಕ್ಷಕಾ | ನಿಜದಿ ವಂದಿಪೆ ರಕ್ಷಕಾ || ಪಲ್ಲ || ದುರಿತ ಕರ್ಮನಾಶಕಾ | ಪರಮ ಭಕ್ತವಾಸಕಾ ಪರಮ ಶರಣ ಶೇವಕಾ | ಎರಗುವೆನು ಪಾಲಕಾ || ೧ || ಕುಸುಮ ಶರನ ನಾಶಕಾ | ಅಸಮ ಫಾಲನೇತ್ರಕಾ | ಮಿಸುನಿ ವರ್ಣ ಗಾತ್ರಕಾ ಹಸುಳ ನಮಿಪೆ ಪೋಷಕಾ || ೨ || ಸುಮನ ಸುರರ ಲಕ್ಷಕಾ | ನಮಿತ ನರರ ರಕ್ಷಕಾ | ನವಿಪೆ ನಿನಗುಪೇಕ್ಷಕಾ | ವಿಮಲ ರಾಮನ ರೂಪಕಾ || ೩ ||

## ೧೫ ನೇ ಪದ.

( ದಾಟಿ—ಶ್ರೀಗುರುದೇವನ ನಿರ್ಗುಣರೂಪನ, ಎಂಬಂತೆ )

ಶ್ರೀಜಗದೀಶಾ ಪರಿಪಾಲಿಸೆನ್ನನು ಮಾಜದೆ | ಸರ್ವರಿಂ ಪೂಜಗೊಂಬನೆ | ಮೂಜಗದಲ್ಲಿ ಪ್ರವೇಶಿಸಿದ ಭವನೆ | ಗೋಜವಾದ ಭ

ದಿಂದ ರಕ್ಷಿಸು || ಪ || ಅಜನ ಬ್ರಮ್ಹಾಂಡ ಪರಿಪಾಲಿಪನೆ | ಅಜಹರಿ ವಂದ್ಯನೆ ಫಣಿಪ ಕಂಕಣನೆ | ರುಜ ಭಯ ಶೋಕವ ಸಲೆ ನೀಗಿದನೆ | ಸುಜನ ರಕ್ಷಕಾ ನಾನೊಂದಿಪೆ ನಿನಗೆ || ೧ || ದುರಿತ ವಿಷವನ್ನು ಹರುಷದಿ ಪಾನಮಾಡಿ | ಮರಣವ ಜಯಿಸಿದ ನೀಲಗ್ರೀವನೇ | ಅರುಣೇಂದು ಶಿಖಿನೇತ್ರಗಳುಳ್ಳನೆ | ಸ್ಮರಿಸುವೆ ನಾನು ನಿನ್ನ ಭಕ್ತಿ ಭಾವದಿ || ೨ || ಪರಮ ಪಾವನ ಪಾರಿಜಾತನೆ | ಗಿರಿಜಾವರ ಸುಜನೈಕ ಬಂಧುವೆ | ಗುರುರಾಮಾರೂಢ ರೂಪನಾದವನೆ | ಪೊರೆಯೊ ನೀನೀಗ ಕರುಣಾನಿಧಿಯೆ || ೩ ||

## ೧೬ ನೇ ಪದ.

( ದಾಟಿ— ರಾಮಾರೂಢರನಾಮವ ಎಂಬಂತೆ. )

ಪಾಲಿಸೆನ್ನನು ನೀಲಕಂದರ ನಿಗಮಗೋಚರ | ಕಾಲನಭೀತಿಯ ಪೋಗಿಸಿ || ಪ || ಶೂಲಪಾಣಿಯೆ ನೀನು ಲೀಲೆಯಿಂದಲೆನ್ನ | ಜಾಲಳಿಸಿ ವಿಷಯಂಗಳ || ೧ || ಆಲಶ್ಯ ಶೋಕ ಮೋಹ ಭಯಾದಿಗಳಿಂ | ಕಾಲನ ವಶವಾಗಿ ನೋಯುವೆ || ೨ || ಆಲಿಸೆನ್ನಯು ಖೇದ ಕರುಣದಿಂದೀಕ್ಷಿಸಿ | ಫಾಲನೇತ್ರಾರೂಢರಾಮನೆ || ೩ ||

## ೧೭ ನೇ ಪದ.

( ದಾಟಿ— ಮಾಲಿಯ ನರ್ಪಿಸಿದ ಬಗಿ ಎಂಬಂತೆ. )

ಕೋಪರಹಿತಭವ ನೀನು | ಪಾಪರಾಶಿಯ ನಾಶಿಸೆನ್ನಯ || ಶಾಪಹರನೆ | ಭಾನುನಯನೆ | ಕಾಪಾಡೆನ್ನನು ||ಪಲ್ಲ|| ದುರಿತನಾಶನೆ ಸೌಖ್ಯಧಾಮನೆ| ಪರಮಭಕ್ತ ಸ್ತೋಮಪಾಲನೆ | ಸರಸಿಜಾತನ ಶಿರಹರನೆ | ಕರುಣ ಮೂರ್ತಿಯೆ || ೧ || ಫಾಲನೇತ್ರ ಫಣಿಪಸೂತ್ರ | ಕಾಲ ಕಾಲ ಸುರಜಾಲ ಪಾಲ || ನೀಲಲೋಹಿತ ಪಾಲಿಸೆನ್ನ | ಮೂಲಮೋದವ || ೨ || ಅನುಪಮನೀ ಶರಣ ಸಹಾಯ | ದಿನಕರ ಕೋಟಿ ತೇಜ | ಅನಘಾನಂದ ಧನದಸಖ | ವಿನುತಮೂರ್ತಿಯೆ || ೩ || ಸೋಮಶೇಖರ ನೀಲಕಂದರ | ಕಾಮಸಾಮಜ ಶರಹರನೆ ||

ಹೇಮನಗರ ವಾಸನೀನು | ಕಾಮಿತ ದಾತಾ || ೪ || ಮರವೆಯನ್ನು ನಾಶಮಾಡಿ | ಪರಮಾನಂದ ಪೊಂದಿಸೆನ್ನ | ಪರಮಾರೂಢರಾಮ ನೀನು | ಪೊರಿಯೊತವಕದಿ || ೫ ||

## ೧೮ ನೇ ಪದ.

( ದಾಟಿ—ಜಾಣನು ಲೌಕಿಕ ಪರಮಾರ್ಥ ವೆರಡನು ಎಂಬಂತೆ. )

ಶಿವಮಂತ್ರ ನುಡಿ ಕಂಡ್ಯಾ ಮಾನವ ನೀನತಿ | ತವಕದಿಂದಲಿ ದಿನಕೊಮ್ಮೆಯಾದರು || ಪ || ಭಕ್ತಿ ಸಹಿತೊಂದು ವೇಳೆ ಸ್ಮರಿಸಿದರೆ | ಭಕ್ತರ ಭಕ್ತನೆಂದು ಕೂಗುವಾ ಪರಮಾತ್ಮ || ಚೊಕ್ಕಮೂರ್ತಿಯ ನೊಮ್ಮೆ ಅಕ್ಕರದಿ ನೆನೆದರೆ| ಲೆಕ್ಕವಿಲ್ಲದ ಪಾಪ ಪರಿಪಟ್ಟು ಪೋಪುದು || ೧ || ಶಿವಮಂತ್ರದಿಂದಲೆ ಬ್ರಹ್ಮ ರುದ್ರಾದಿಗಳು | ಪವಿತ್ರರಾಗಿ ಜಗತ್ಸೃ ಷ್ಟ್ಯಾದಿ ಮಾಳ್ಪರು || ಶಿವಮಂತ್ರದಿಂದಲೇ ಸೂರ್ಯ ಚಂದ್ರಾದಿಗಳು | ಜವದಿಂದೀಭೂಮಿಗೆ ಪ್ರಕಾಶ ಕೊಡುವರು || ೨ || ಮುನ್ನ ಸಾನಂದ ಓಂ ನಮಃ ಶಿವಾಯೆಂದು | ಉನ್ನತ ನರಕಿಗಳೆಬ್ಬಿಸಿದಾನ ರಕದಿಂ || ಸನ್ನುತರಾದ ಶ್ವೇತಾದಿಗಳಿದರಿಂದ | ಚಿನ್ನಿಧಿರಾಮಾರೂಢನ ಪೊಂದಿದರೆಲ್ಲ || ೩ ||

## ೧೯ ನೇ ಪದ.

( ಧಾಟಿ—ಜಯಜಯ ಮಂಗಳಮಯ ಮಹಿಮೋದಯ ಎಂಬಂತೆ. )

ಜಯಜಯ ಮಂಗಳ ಜಯಜಯ ಮಂಗಳ ಜಯಜಯ ಮಂಗಳ ಮಂಗಳಮೂರ್ತಿಗೆ | ಜಯಜಯ ಮಂಗಳ ಜಯಜಯ ಮಂಗಳ ಮಂಗಳಜಯತು ಜಯ || ಪ || ಅಂಗಜಹರನಿಗೆ ಅಂಗಲಿಂಗೈಕ್ಯಗೆ | ಗಂಗಿಯಧರನಿಗೆ ಸಂಗ ರಹಿತಗೆ | ತುಂಗಭದ್ರಗೆ ಪುಂಸೃಷ್ಟಿಗೆ ಗಾಂಗೆಯಪಿತನಿಗೆ || ಜಯ || ಅಂಗದೊಳಗಿನ ಇಂಗಿತವರಿವಗೆ | ಕಂಗಳಮಧ್ಯಗೆ ಮಂಗಳಗಾತ್ರಗೆ | ಕಿಂಕರಸಂಗಗೆ ಶಂಕರಹರನಿಗೆ ಪಂಕಜಪಾದನಿಗೆ ಜಯ || ೧ || ಅನಮಿತಗಾತ್ರಗೆ ಫಣಿಪತಿ ಸೂತ್ರಗೆ | ಅನಲನೇತ್ರಗೆ ದಿನಕರರೂಪಗೆ | ಅನವದ್ಯಭಾವಗೆ ಮನು

ಮುನಿವಂದ್ಯಗೆ ಅನಂತರೂಪನಿಗೆ ಜಯ || ಅನುಪಮತೇಜಗೆ ವಿನುತವಾಣಿಗೆ | ಅನಂತಮಹಿಮಗೆ ಅನಾದಿಕಾಲಗೆ | ವನರುಹನಯನಗೆ | ಕನಕಾದ್ರಿವಾಸಗೆ ಚಿನ್ಮಯರೂಪನಿಗೆ ಜಯ || ೨ || ಭಕ್ತೋದ್ಧಾರಗೆ ಭಕ್ತಸಮೂಹಗೆ | ಮುಕ್ತಿದಾತಗೆ ಶಕ್ತಿಸಹಿತಗೆ | ಭಕ್ತವತ್ಸಲಗೆ ಯುಕ್ತಿವಂತಗೆ ಸೂಕ್ತಿಯಮೀರಿದಗೆ ಜಯ || ಮಿಕ್ಕಿದಾನಂದಗೆ ಮುಕ್ಕಂಣಮೂರ್ತಿಗೆ | ಅಕ್ಷರರೂಪಗೆ ಒಕ್ಕರರಹಿತಗೆ | ಲೆಕ್ಕಕೆಮೀರಿದ ಚೊಕ್ಕ ರಾಮಾರೂಢರೂಪಾದವವನಿಗೆ ಜಯ ಜಯ || ೩ ||

## ೨೦ ನೇ ಪದ.

( ಧಾಟಿ—ಜಯಜಯ ಮಹಾಂತಗುರುವರ ಸುಯಿಭೊ ಎಂಬತೆ. )

ಜಯಜಯ ಭವಾನಿ ಬೇಗನೆ ರಕ್ಷಿಸು | ದಯಮಾಡಿಯನ್ನನು ಆಶಪಾಶದಿ || ಪ || ನಿರುಪಮಚರಿತೆನಿ | ವರಗುಣಭರಿತೆನಿ | ದುರಿತವಿರೋಧಿನಿ | ನಿರುತದಿನಮಿಪೆನಾ ||೧|| ಸಾರಸಗಂಧಿನಿ | ವಾರಿಜವದನಿನಿ | ಕಾರಣರೂಪಿಣಿ | ಆರಿಸದೆನ್ನದೋಷ || ೨ || ಜಗದಾಧಾರಿನಿ ಸೊಗಸಿನಸಿಮೇನಿ | ಅಗಣಿತನಾಮಿನಿ | ಸುಗಮದಿಂದನಿ || ೩ || ಜನನವಿದೂರಿಣಿ | ಚಿನುಮಯರೂಪಿಣಿ ಮುನಿಕುಲವಂದ್ಯನಿ | ಅನಂತಕರ್ಮದಿ || ೪ || ಪಾರಾಯಣಮಾಡುವೆ | ಗೀರ್ವಾಣಪೂಜೆನಿನ್ನ | ಪಾರಾವಾರಿನಿ ಶ್ರೀರಾಮಸಾಧ್ಯನಿ || ೫ ||

## ೨೧ ನೇ ಪದ.

( ಧಾಟಿ—ಮರೆಯದಿರು ಮರೆಯದಿರು ಎಲೆಮಾನವಾ ಎಂಬಂತೆ.)

ನಗಜಾತೆ ಪೊರೆಯೆನೀ ಪನ್ನಗವೇಣಿ | ಅಗಣಿತ ಬಾಧೆಯನಾ ತಡೆಯೆಜಾಣಿ || ಪಲ್ಲ || ಮೂರುಕರಣದ ಬಾಧೆ | ಮೂರುಕಾಯದ ಬಾಧೆ | ಮೂರುತಾಪದಬಾಧೆ | ಯೆನ್ನನಳಿಸುವದು || ಮೂರೀಷಣದ ಬಾಧೆ | ಮೂರುದೋಷದ ಬಾಧೆ | ಮೂರುಕರ್ಮದ ಬಾಧೆ ಬಹು ಬಳಲಿಸುವದು || ೧ || ನಾಲ್ಕುಕರಣದ ಬಾಧೆ | ನಾಲ್ಕಾಶ್ರಮದ ಬಾಧೆ | ನಾಲ್ಕುಮೋಹದ ಬಾಧೆ | ಶಿಕ್ಕಿಮುಕ್ಕುವದು || ನಾಲ್ಕುಕರ್ಮದ

ಬಾಧೆ | ನಾಲ್ಕುವರ್ಣದ ಬಾಧೆ | ನಾಲ್ಕುಯೋನಿಯ ಬಾಧೆ ಸುತ್ತು ತಿರುವದು || ೨ || ಪಂಚಕ್ಲೇಶದ ಬಾಧೆ | ಪಂಚಭ್ರಮೇಯದ ಬಾಧೆ| ಪಂಚವಿಷಯದಬಾಧೆ| ಬೇಸಿಗೆಯಿಂತಿಹುದು|| ಪಂಚೇಂದ್ರಿಯದ ಬಾಧೆ| ಪಂಚಪ್ರಾಣದ ಬಾಧೆ | ಪಂಚಪಾತಕದ ಬಾಧೆ | ಯೆನ್ನನ್ಹೀರುವದು || ೩ ||ಆರುವರ್ಗದ ಬಾಧೆ | ಆರುವಿಕೃತಿ ಬಾಧೆ | ಆರೂರ್ಮಿಗಳ ಬಾಧೆ ಬಾಯ್ತೆರಿಸುವದು || ಆರವಸ್ಥೆಯ ಬಾಧೆ| ಆರುರುಚಿಗಳ ಬಾಧೆ| ಆರು ಭ್ರಮೆಗಳ ಬಾಧೆ ಯೆನ್ನಮುಸುಕುವದು || ೪ || ಇಷ್ಟು ಕಷ್ಟಗಳೆನ್ನ | ಸೃಷ್ಟಿಯುಲಿ ನಿಲ್ಲಿಸದೆ | ದುಷ್ಟ ಹುಲಿಯಂತೆನ್ನ ತೇಗುವವು ತಿಂದು || ಕಷ್ಟರಹಿತಳಾದ | ಶಿಷ್ಟರೂಪಿಣಿಯಿಂದ | ಇಷ್ಟ ರಾಮಾರೂಢ ನೋಳ್ಪೆರೆಸು ಮಾತೆ || ೫ ||

## ೨೨ ನೇ ಪದ.

( ಧಾಟಿ—ಅರ್ಜುನಿಯ ಮಜಕರಿ ಸಗುಣ ಭಜನಕರಿ ಎಂಬಂತೆ. )

ಪರಬ್ರಹ್ಮಸ್ವರೂಪಿಣಿ | ಸುರನರವರದಾನಿ | ಹರಿಬ್ರಹ್ಮ ಶಿವಮುನಿ | ವರದಿಂದಪೂಜ್ಯನಿ || ಯೇರು || ಸುರನತ ಚರಣಿ | ದುರಿತನಿವಾರಿಣಿ | ವರಗುಣ ಗಣಮಣಿ | ಸರಸಿಜಾಕ್ಷಿನಿ || ೧ || ಭವಭಯನಾಶಪೂರ್ಣೆ | ಭವಾನಿವಿರಾಜ ಜ್ಞಾನಿ | ಪಾವನಿ ಸಿಂಹಾರೋಹಿಣಿ | ದೇವಿ ಶುಂಭವಿದಾರಣಿ || ಏರು || ತವವೇದವಾಣಿ | ಪವಿತ್ರಪಾವನಿ | ಸುವಿಚಾರ ಶುರಧೇನಿ | ಜೀವಿಭಾವಿ ಶರ್ವಾಣಿ || ೨ || ಆದಿಶಕ್ತಿ ಕಳೆಪೂರ್ಣೆ | ನಾದಬಿಂದು ಮಂದಿರಿಣಿ | ಶೋಧಸಿದ್ಧಿ ವಿದ್ಯಾದಾನಿ | ಸದಮಳಜ್ಞಾನಾಂಗಿನಿ || ಏರು || ಸದಾಷ್ಟಪಾಣಿ | ಮದದೈತ್ಯಹರಣ | ಬೋಧಾದಿಕ ಮುಕ್ತಿಖಣಿ | ಸಾದ್ಧ್ಯರೂಢರಾಮಘನಿ || ೩ ||

## ೨೩ ನೇ ಪದ.

( ಧಾಟಿ—ಮಂಗಲಂತೆ ಸದ್ಗುರು ಶಂಭುಲಿಂಗ ಎಂಬಂತೆ.)

ಮಂಗಲಾಂಗಿ ಬೆಳಗುವೆನಾರತಿ | ಮಂಗಲದಿಂದಲಿ ನಾಪ || ಅಗಣಿತ ಮಹಿಮೆ ನೀನು ಸುಗುಣಿ | ನಿಗಮಾಗಮವಾಣಿಯೆ

ಭವಾನಿ || ಜಗದುದಯ ಬೀಜೆ ನೀ | ನತಚರಣೆ | ಹ್ರೀಂಕಾರಿಣಿ | ಕಳೆಪೂರ್ಣೆ | ಕಲ್ಯಾಣಿ || ೧ || ಸೋಮಸೇಖರ ದೇವನ ಅರ್ಧಾಂಗಿನಿ | ವಾಮಭಾಗದಿ ಸ್ಥಾಪಸಿ | ಧ್ಯಾನಾರ್ಚನಿ || ಪಾಮರಜನ ರಕ್ಷಣಿ | ವಿಮಲೆ ನೀ ಕಮಲೆನೀ | ಸುಮತಿ ನೀ ಶರ್ವಾಣಿ || ೨ || ಮದಮೋಹಾದಿ ಚಯವನಾಶ ನಿ | ಸದಮಳವರಗುಣ ಗಣಮಣಿ | ಸದ್ರಾಮರೂಪಿಣಿ| ಗುಹಜನನಿ | ದಯಪೂರ್ಣೆ | ಗಿರಿಜೆ ನಿ | ಅಮೃತೆ || ೩||

೨೪ ನೇ ಪದ.

( ಧಾಟಿ—ಶ್ರೀಗುರುದೇವನ ನಿರ್ಗುಣರೂಪನ ಎಂಬಂತೆ. )

ಶ್ರೀಗಣವರನೆ ಕರಿರಾಣ್ಮುಖನೆ | ಬೇಗದಿ ಮುಕ್ತಿಯ ದಯಪಾಲಿಸೆನಗೆ | ಈ ಗಲೆ ನಿನ್ನಯ ಚರಣಾರವಿಂದಕೆ ಬೇಗದಿವಂದಿಪೆ ಯೋಗಿವಂದ್ಯನೆ || ಪ || ವೆಸನ ಸಪ್ತಗಳೆಡೆ ಬಿಡದೆನ್ನನು | ಪಸರಿಸದಂತೆ ಮಾಡುತಿರುವವು || ಕುಸುಮಬಾಣನ ಬಾಧೆಯು ಯನ್ನನು | ಹಿಸುಕಿ ಹಿಪ್ಪಿಯನು ಮಾಡಿ ಬಿಡುವದು || ೧ || ಪಂಚವಿಷಯದೊಳ್ ಮೋಸ ಹೊಂದುವೆ | ಪಂಚಮುಖ ಶಿವನಿಂದ ಸಮಿತನೆ || ಸಂಚೈಸಿದ ತನುಮನ ಧನಗಳಂ | ವಂಚನೆ ಇಲ್ಲದೆ ಶೀಘ್ರದಿಮರ್ಪಿಸುವೆ || ೨ || ಪರಮಗಣಾಳಿಯಿಂದ ಶೇವಿತನೆ | ಗಿರಿಜಯ ಸುತನೆ ದುರಿತನಾಶನೆ || ಮರವೆಯು ನಾಶಿಸಿ ತ್ವರಿತದಿಂದೀಗ | ಪರಮಾರೂಢ ಗುರುರಾಮನ ಪೊಂದಿಸೈ || ೩ ||

೨೫ ನೇ ಪದ.

( ಧಾಟಿ—ಜಯಜಯ ಮಹಾಂತ ಗುರುವರ ಸುಯಿಭೊ ಎಂಬಂತೆ. )

ಶ್ರೀಗಣವರನಣಿ ಮಾದಿ ಸಿಂಧು | ಬೇಗದಿ ವಿಘ್ನನಾಶ ಬಂಧು || ಪಲ್ಲ || ಭಜಿಪೆ ನಿಮ್ಮ ಧ್ಯಾನ | ನಿಜಗಜವದನ | ಪೂಜಿಪೆ ಮನೋಹರ ಚಂದ || ೧ || ಲಂಬೋಧರನು | ಶಂಭು ತ್ರಿಶೂಲನು | ಬಿಂಬಪರಮಾನಂದ || ೨ || ಪರಶುವರಧರ | ಚರಣ ಮೂಷಕಸುರ | ನರವಾಂಛಿತ ಪೂರ್ಣೆಂದು || ೩ || ಬ್ರಮ್ಹಾದಿಗಳಂ | ಪ್ರೇಮದಿಂದಮ

ಳಂ | ತಮ್ಮ ಮನೋಧ್ಯಾನದಿಂದ || ೪ || ಋಷಿಮುನಿ ಗಣನಿಂಮ | ದಾಸಾನುದಾಸ ಪ್ರೇಮ | ಈಶಾರೂಢರಾಮ ಬಂಧು || ೫ ||

೨೬ ನೇ ಪದ.

( ಧಾಟಿ—ಪಾಂಡುನೃಪತಿ ಜನಕಜಯ ಎಂಬಂತೆ. )

ಗಣವರನೆ ಪಾಹಿಪಾಹಿ | ಅಣಿಮಾದಿ ಸಿದ್ಧ ದಾತಾವಾ | ರಣಮುಖ ಭವದಂಘ್ರಿಗೆಶ | ರಣುಮಾಡುವೆ || ಪ || ಶ್ರೀವಿನಾಯಕ ಸುಖಕರ | ಪಾವನಾತ್ಮಕ ಕಾಂಚನಾಭ | ದೇವತೆಗಳಿಂ ಭಜಿಪನೆ | ಶೇವೆ ಮಾಡುವೆ || ೧ || ಅಂತರಾಯ ಶೈಲಗಳಂ | ಸಂತಸದಿ ಭಂಗ ಕರ್ತನೆ || ಕಂತುಹರನ ಸೂನು ನಿನಗೆ | ವಂದಿಪೆನಾನು || ೨ || ನಂದಿ ಭೃಂಗಿ ವೀರೇಶಾದಿಗಳಿಂ | ಚಂದದಿಂದ ಪೂಜ ಗೊಂಬನೆ || ಸುಂದರ ಮುಖ ನಿನ್ನಾರ್ಚಿಸುವೆ | ಗಂಧ ಪುಷ್ಪದಿ || ೩ || ಶೂರ್ಪಕರಣನೆ ವಕ್ರತುಂಡನೆ | ಪಾರಿಜಾತನೆ | ಕಾಮಿತರಿಗೆ || ವಾರಿಜಾಕ್ಷಿಯ ಪ್ರಿಯಪುತ್ರ ಪೂರ್ಣಗಾತ್ರನೆ || ೪ || ಸೋಮಹರ್ಪತಿ ವಂದ್ಯನೀನು | ಪ್ರೇಮದಿಂದ ರಕ್ಷಿಸೆನ್ನ || ಶ್ರೀಮದ್ಗುರು ರಾಮಾರೂಢನ | ನಾಮವು ನೀನೆ || ೫ ||

೨೭ ನೇ ಪದ.

( ಧಾಟಿ—ಮಂಗಳಾರತಿ ತುಂಗಚರಿತಗೆ ಎಂಬಂತೆ. )

ಮಂಗಳಾರತಿ ವಿಘ್ನೇಶ್ವರನಿಗೆ | ಮಂಗಲೆಂದು ಚಂದದಿಂದ ಎತ್ತಿಬೆಳಗುವ ||ಪ|| ಚತುರ್ಭುಜನಾದ ಗಣವರೇಣ್ಯಗೆ | ಚತುರ್ವೇದ ನಿಚಯಗಳಿಂ ವಿನುತ ಮೂರ್ತಿಗೆ || ಸತ್ತುಚಿತ್ತಾದಿ ಲಕ್ಷಣುಳ್ಳಗೆ | ಬಿತ್ತರಿಸಿದ ಹೃದಯಗ್ರಂಥಿ ಪರಮಮೂರ್ತಿಗೆ || ೧ || ಭುಜಗಭೂಷಣನ ಪರಮಸುತನಿಗೆ | ರಜತಗಿರಿಯಲ್ಲಿ ವಾಸಿಪ ಶಂಭುಶಂಕರಗೆ || ಅಜಹರಿಗಳಿಂ ವಂದಿಪಗಾತ್ರಗೆ | ಸುಜನಭಕ್ತ ಸ್ತೋಮದಲ್ಲಿ ವಾಸ ಮಾಡಿದಗೆ || ೨ || ವರಗುಣಮಣಿ ಮಂಡನಮೂರ್ತಿಗೆ | ಕರಿಮುಖಗೆ ಸರ್ವಸಿದ್ಧಿಯ ಕಾರಣಿಭೂತಗೆ || ಗಿರಿಜಸುತನಿಗೆ ಮರಣಜಯಸಿದಗೆ | ಪರಮಾರೂಢ ರಾಮನಭಿದಾನವುಳ್ಳಗೆ || ೩ ||

## ೩೮ ನೇ ಪದ.

( ಧಾಟಿ—ಶಿವಲಿಂಗ ಪೂಜೆಯ ನೆನಸಗೊ ಎಂಬಂತೆ. )

ಶಿವ ಶಿವ ಶಿವ ಶಿವ ಶಿವನಾಮ | ಭವಹರ ಶಂಕರ ಭಕ್ತಪ್ರೇಮ | ಶಿವಧಾಮ || ಅವಿನಾಶಿ ಸದಾಬ್ರಮ್ಹ ಪರಮ | ದೇವ ಪ್ರಮಥರ ಗಣ ಸ್ತೋಮರಾಮ | ದೇವ ನೇಮ || ತವಪ್ರೇಮ | ತವಕ್ಷೇಮ ಶೇವಕರ ಸ್ತೋಮ |ಭಾವದಿಂ ನೇಮ | ಸುವಿಚಾರನುಪಮ | ಸುವಿಚಾರನು ಪಮ | ಸುವಿಚಾರನುಪಮ | ಭವನಾಶ ಭಕ್ತಸುಖ ನಿಸ್ಸೀಮ || ೧ || ಜಡಿಯಲಿ ಗಂಗಾವಿಲಾಸ ತೊಡಿಯೊಳ್ ಅಗಜ ನಿತ್ಯದಾಸಿ | ಮೂಢನಾಶಾ | ಮೃಡನಂಗ ಭಸ್ಮ ನೊಸಲೀಶ | ರುಂಡ ಮಾಲ ಸ್ಮಶಾನಪ್ರವೇಶ | ವಿಷಪ್ರಾಶ || ಷೋಡಶ | ಷೋಡಶ | ನಡುಕಲೆ ಶಶಿ | ಮೃಡಶಿರವಾಸ | ನೋಡಿ ತ್ರಿನೇತ್ರೇಶ | ನೋಡಿ ತ್ರಿನೇತ್ರೇಶ | ನೋಡಿ ತ್ರಿನೇತ್ರೇಶ | ಪಿಡಿದನು ತ್ರಿಶೂಲ ಸರ್ವೇಶ || ೨ || ಕಾಮಿ ತಜನರ ಕಲ್ಪಭೂಜ | ನಾಮನೆನೆ ರಾವಣಮನೆ ನಿಜ | ಪ್ರೇಮಜ || ಸೂಮರಣ ನಂದಿಗಣ ಸಹಜ | ಕಾಮ ತ್ರಿಪುರಾಸುರ ಧ್ವಂಸ ವೋಜ | ಸ್ವರೂಪಜ || ಬ್ರಮ್ಹತೇಜ | ಬ್ರಮ್ಹತೇಜ | ಸಮಾನನ್ಯ ಪೂಜ | ನೇಮ ದಶಭೂಜ | ಸಮಾನವಿರಾಜ | ಸಮಾನವಿರಾಜ | ಸಮಾನವಿರಾಜ | ಸ್ವಾಮಿ ರಾಮಾರೂಢ ಮಹಾತೇಜ || ೩ ||

## ೩೯ ನೇ ಪದ.

( ಧಾಟಿ—ಕೈಯನಂದ್ಹಿಡದೆಳೆವಾ ಎಂಬಂತೆ )

ದೇವಾ ಯನ್ನನೀ ಪೊರೆಯಲಾಗದೆ || ಪ || ಕ್ಲೇಶಪಂಚದಿಂದ | ಪಾಶಮೂರರಿಂದ || ಈಷಣತ್ರಯದಿಂದ | ದೂಷಣಂಗಳಿಂದ || ೧ || ಕುಸಂಗಾದಿಗಳಿಂದ | ವ್ಯಸನಸಪ್ತದಿಂದ || ಅಸತ್ಯವಿಷಯದಿಂದ | ಅಸಮಕರ್ಮದಿಂದ || ೨ || ಆರುವೈರಿಗಳಿಂದ | ಮೂರುತಾಪದಿಂದ | ಘೋರ ಸಂಸೃತಿಯಿಂದ | ಘೋರಿಸದೆನ್ನನಿಂದ || ೩ || ನಾಲ್ಕು ವರ್ಣದಿಂದ | ನಾಲ್ಕಾಶ್ರಮದಿಂದ || ನಾಲ್ಕುಮೋಹದಿಂದ | ನಾಲ್ಕು

ಕರಣದಿಂದ || ೪ || ಆಜ್ಞಾನದಹಿಸೆಂದು | ಸುಜ್ಞಾನ ಪಿಡಿಯೆಂದು || ತಜ್ಞರೊಳು ಕೂಡೆಂದು | ಸುಜ್ಞಗುರು ರಾಮನೆಂದು || ೫ ||

### ೩೦ ನೇ ಪದ.

( ದಾಟಿ—ಬೋಧಿಸೆನ್ನನು ಗುರುವೆ ಎಂಬಂತೆ. )

ಪೊರೆಯಬಾರದೇಸೊ ದೇ | ವನೀನೆನ್ನ ಮರುಳತನವ ನೋಡಿ || ಅರುವಿಲ್ಲದೆ ಪುಣ್ಯ ಪಾಪಗಳೆಂಬ ಮಹಾ | ಮರವಿನೋಳ್ಸಿಲ್ಕಿನಾಶಾಕಿಯಾಗುವೆ || ಪ || ಮಾಡಬಾರದ ಮಹಾ | ಪಾಪವನು | ಮಾಡಿ ಕೆಟ್ಟು ಹೋಗುವೆ || ಆಡಬಾರದ ಪರರ ನಿಂದೆಯನಾಡಿನಾ | ನಾಡದೊಳಗೆ ಮೂಢನಾಗುದು ನೋಡಿ ನೀ ||೧|| ಮಾಡಬಾರದತಿ ಹಿಂಸೆ | ಗಳನುರೆ | ಮಾಡಿ ಪಾಶಕೆ ಹೋಗುವೆ || ಕೂಡಬಾರದ ಪರರ ಸ್ತ್ರೀಯರಕೂಡಿ ನಾ | ಕೇಡವಾಗದ ಕಲುಷ ಹೊರುವದು ಕಂಡು ನೀ || ೨ || ತೊಡಬಾರದತಿ ಹೀನ | ಜಲ್ಮವ ತೊಟ್ಟು | ಎಡರಿಗೆ ಹೊಣೆಯಾಗುವೆ | ಮಡದಿಮಕ್ಕಳ ದ್ರವ್ಯದಾಶೆ ಬಿಡದೆ ನಾ | ಕಡೆಗೆ ಯಮದೂತರ ವಶವಾಗುವದು ಕಂಡು || ೩ || ಎಷ್ಟುಪಾಪವ ಮಾಡಿದ | ರೀಮನುಜನು | ಕಷ್ಟಕೆ ಅಂಜನೆಂದು || ಶಿಷ್ಟನಾದ ನಾನು ಭ್ರಷ್ಟತನವ ಬಿಡಿಸಿ | ಇಷ್ಟದೋಳ್ಬೆರಿಸಬೇಕೆಂಬ ದಯದಿಂದ || ೪ || ಶರಣು ಬಂದೆ ನಿನಗೆ | ಕರುಣನಿಧಿ | ಶೆರೆಯು ಬಿಡಿಸುಭವದ || ವರಗುರು ರಾಮಾರೂಢನಾದ ನಿನಗೆ | ಬಿರಿದು ಪುಸಿಯೇನೊ ಭಕ್ತವತ್ಸಲನೆಂಬ || ೫ ||

### ೩೧ ನೇ ಪದ.

( ದಾಟಿ—ನೋಡಲಾಗದೆ ದೇವ ನೋಡಲಾಗದೆ ಎಂಬಂತೆ. )

ಪೊರೆಯೊ ದೇವನೀಯನ್ನ | ಪೊರೆಯೊ ದೇವನೀ || ಕರುಣದಿಂದ ನೋಡಿಯನ್ನ | ಮರವಿಯನಳಿಸರುವ ಕೊಟ್ಟು || ಪ || ರೋಗಪೀಡೆ ಬಾಧೆಗಳು | ಈಗಳೆನ್ನ ಬಳಲಿಸುವವು | ಶ್ರೀಗಿರಿಜ ಪತಿಯು ನೀನು | ಯೋಗದೋಳು ಕೂಡಿಸೆನ್ನ || ೧ || ಕುಸುಮ ಬಾಣನದತಿ ಬಾಧೆ | ಮುಸುಕಿಯನ್ನ ತೊಳಲಿಸುವದು | ಬಿಸಿಜಾಕ್ಷ ನೀನುಯನ

ಗೆ | ಅಸಮುಫಾಲ ನೇತ್ರಕೊಟ್ಟು || ೨ || ಆಶಪಾಶದ ಬಾಧೆಯನ್ನ ನಾಶಮಾಡುವದೇನು ಹೇಳಲಿ || ಈಶನಿನ್ನ ಕಟಾಕ್ಷದಿಂ | ನಾಶವಾ ಡೆನ್ನಾಶಪಾಶ || ೩ || ಬಾಲಮಾಡಿದ ನೀಚಕೃತ್ಯ ಆಲಿಸದ ಪಿತನತೆರ ದಿ || ನೀಲಲೋಹಿತೆನ್ನ ಗುಣವ | ನಾಲಿಸದೆನೀ ಬೇಗದಿಂದ || ೪ || ದೀನನಾದಯನ್ನ ನೀನು | ಮಾನನಿಧಿಯ ರಾಮಾರೂಢನ || ಸಾನಿ ಧ್ಯವ ಪೊಂದಿಸೀಗ | ಜ್ಞಾನಮೂರ್ತಿ ನೋದದಿಂದ || ೫ ||

## ೩೨ ನೇ ಪದ.

( ದಾಟಿ—ಗುರುವರನೆ ನನಗಿಂತರಧಿ ಕರಾರುಂಟು ಎಂಬಂತೆ. )

ನೀನಾವ ಸುಗುಣಿಯಂತೆನ್ನ ಗುಣನೋಡುವೆ | ಸೇನಾಧಿಪಂ ಗೆ ಜನಕನಾದ ಭವ || ಪ || ನಿನ್ನಪ್ಪಣೆಯಂತೆ ನಡೆವ ಯಮಧರ್ಮ ನ | ಸೊನ್ನಿಲ್ಲದವನಿಗೆ ತ್ರಿಶೂಲದಿಂದಿರಿದೆ || ಚನ್ನಚಲುವಿಕೆಯುಳ್ಳ ಮನ್ಮಥನ ದಹಿಸಿದೆ | ಉನ್ನತ ಶೃತಿಗಳ ಸ್ಥಾನ ಮಾಡೋಡಿಸಿದೆ ||೧ || ಮೂರುಪಟ್ಟಣದ ಒಕ್ಕಲವನೆ ಕೆಡಿಸಿದೆ| ಸಾರಬ್ರಮ್ಹನ ಶಿರವನೆರೆ ಛೇದಿಸಿದೆ || ನಾರದನ ನೇತ್ರವನೊಡಂಬಟ್ಟು ತೆಗಿಸಿದೆ | ಶೂರದಿಂದ ಕ್ಷನ ಯಜ್ಞಪೂಜಯಳಿದೆ || ೨ || ಶಿರಿಯಾಳಪುತ್ರನ ಶಿರವನೆ ಕೊ ಯ್ಸಿದೆ | ಪರಮಗಂಗಿಯ ನೀ ಸತಿಯುಳಿಸಿಸಿದೆ || ಪರಿಕಿಸಲು ನಿನ್ನಯ ನಿಂದೆಗಳು ಬಹಳುಂಟು | ಗುರು ರಾಮರೂಪನೆ ಪೊರೆಯನ್ನ ಬೇಗ || ೩ ||

## ೩೩ ನೇ ಪದ.

( ದಾಟಿ—ಶನ್ನಶಾನರಿ ದೊಡೆ ಮುಕ್ತ ಎಂಬಂತೆ. )

ಉಚ್ಚನೀಚಗಳ ಜ್ಞಾನದ | ನಿನ | ಗೆಚ್ಚರಿಕೆಯಿಲ್ಲವೊ ಶಂಭು ಶಂಕರ || ಪಲ್ಲ || ಆನೆ ಕುದುರೆಗಳನೋತು | ಬಿಟ್ಟು | ನೀ ನಂದಿಯ ನೇರಿದಲೆ ಶಿವನೆ | ನೀನೆಲ್ಲಕೋರ್ವನಧಿಕ | ನಿದ್ದು | ಮಾನವಿಲ್ಲದೆ ತಿರಿದುಂಬಿ ವರದ || ೧ || ವರಮುತ್ತಿನ ಹಾರಬಿಟ್ಟು | ನೀನು | ಕೊರ ಳೊಳು ರುಂಡವ ಧರಿಸಿದಭವ || ಪರಮಕಸ್ತೂರಿ ಗಂಧವ | ನುಳಿದು | ಶರೀರಕೆಲ್ಲ ನೀನು ಬೂದಿಯ ತಾಳ್ದೆ || ೨ || ಜರದವಸನ ಹೊರುವ್ವ

ವದು | ಬಿಟ್ಟು | ಕರಿಯತೊಗಲನೆ ಹೊದ್ದಿದೆ ದೇವ||ಪರತರಲಂಕಾರ ತ್ಯಜಿಸಿ | ನೀಸು | ಕೊರಳಿಗೆ ಸುತ್ತಿದಹಿಗಳನಭವ || ೩ || ಸುತಿಯ ಮಾಡುವ ಸಮಸ್ತ | ದೇವ | ತತಿಯಬಿಟ್ಟು ನೀನು ಭೂತಗಳ ಕೇರಿ ದೆ || ಅತಿ ಹಿತ ಹೇಮನಗರವ | ತ್ಯಜಿಸಿ | ಅತಿ ನೀಚವಾದ ಸ್ಮಶಾನ ದಲ್ಲಿರುವಿ || ೪ || ಪರಮ ಮೂರ್ತಿಯ ನಿನಗಿನಿತು | ಜ್ಞಾನ | ವರಕ ನಿಷ್ಟವೆಂಬುದಿಲ್ಲವು ಹರನೆ || ಇರದಿದ್ದರೇನಾಯಿತಭವ | ನಿನ್ನ | ಪರ ಮಾರೂಢ ರಾಮರೂಪವ ತೋರೊ || ೫ ||

## ೩೪ ನೇ ಪದ.

( ದಾಟಿ—ಆರೇನು ಮಾಡುವರು ಆರಿಂದಲೇನಹುದು ಎಂಬಂತೆ. )

ಎನ್ನರಕ್ಷಿಸದಿಹುದಿದು ನಿನ್ನರೀತಿಯೊ | ಮುನ್ನಿನ ಭಕ್ತರನು ಪ್ರೇಮದಿಂ ರಕ್ಷಿಸಿ || ಪಲ್ಲ || ನಿನ್ನನೆ ಮರೆಹೊಕ್ಕಾರ್ಯನ ಕಂಡು | ಪನ್ನಂಗಧರನಾದ ನಿನ್ನೊಳ್ವೆರಸಿ ಕೊಂಡಿ || ಉನ್ನತ ನಿಷ್ಟೆಯು ಕಲಿ ಯಾರನಿಗೆ ನೀನು | ನನ್ನಿಪದವಿಯನಿತ್ತು ರಕ್ಷಿಸಿದೆ ದೇವ || ೧ || ಪರಮಭಕ್ತನಾದ ಭಟ್ಟಾರಕಯ್ಯನು | ಶಿರವನೆ ಛೇದಿಸಿಕೊಳ್ಳಲಾಕ್ಷ ಣದಿ || ಪರತರ ಮೂರ್ತಿಯೆ ನೀನವನಿಗೆ ಪ್ರತಿಯ | ಶಿರವನಿತ್ತು ಗಣ ಪದ ವಿತ್ತೆ ದೇವ || ೨ || ಕಲುಷದಿಂ ತುಂಬಿರ್ದ ಶ್ವೇತಾದಿಗಳನೆಲ್ಲ | ನಲಿದು ಸಲುಹಿ ನೀನುನ್ನತ ಪದವಿ ಕೊಟ್ಟೆ || ಸಲಹುದೇವಾಯನ್ನ ಮರೆಯುಹೊಕ್ಕೆನು ನಿನ್ನ | ಕಲುಷರಹಿತಾರೂಢ ರಾಮರೂಪನೀ |೩|

## ೩೫ ನೇ ಪದ.

( ದಾಟಿ—ಮನಸು ಬಾರದು ಈ ಮಂಚ ಎಂಬಂತೆ. )

ನೀನೊಲಿಯದ ನಿಮಿಷ | ನಾ ಇರಲಾರೆ | ಮಾನನಿಧಿಯ ಪಾಹಿಮಾಂ || ಕಾನನವೆಂಬ ಭವದೊಳು ಸಿಲುಕಿ ಗತಿ | ಗಾಣದೆ ನಾನತಿ ಕಷ್ಟಕೀಡಾಗುವೆ || ಪ || ಸುರರಸಮೂಹ ಪಾಲನೆ | ಖಲ ಕಾಲನ | ವೈರಿಯೊ ನೀನು ಶಿವನೆ | ಕರುಣಾರಸಭರಿತಕ್ಷ ಸುಗುಣಮ ಣಿ ಭೂಷಣ | ಸರಸಮೃದು ಸಲ್ಲಾಪಯತಿನುತ ಭವನೆ || ೧ || ಪರ

ಮ ಮುನಿಜನರ | ಹೃದಯಕೆ | ಸರಸಿರುಹ ರವಿಯೊ | ಅರುಣ ಚಂ
ದ್ರವವಸ್ನಿ ನಯನಗಳುಳ್ಳನೆ | ಕರಿಯುವದನ ಷಣ್ಮುಖ ಜನಕನೆ ||
೨ || ನರಹರಿ ಭಂಗಸಚರಾ | ಚರಪಾಲನೆ | ಪುರಹರಜಿತಕಾಲನೆ ||
ಸುರರ ಸಮುದಾಯನೆ ವರಗಿರಿಧಾಮನೆ | ಪರಮ ಶ್ರೀಗುರು ರಾಮಾ
ರೂಢನಾದವನೆ || ೩ ||

೩೬ ನೇ ಪದ.

( ದಾಟಿ—ಬಿಡುಬಾಹ್ಯದೊಳು ಡಂಭವ ಎಂಬಂತೆ. )

ಪೊರೆಯೋ ನೀ ಕರುಣಾಸಿಂಧು | ಯನ್ನಯ ಮೇಲೆ |
ಕರುಣಕಟಾಕ್ಷವಿಟ್ಟು | ಸರಸವಲ್ಲದ ಪ್ರಪಂಚದೊಳು ನಾನು | ನಿರುತ
ದ ಭಿಮಾನಿಸಿ ಅಂಧನಾಗುವೆ || ಪ || ಬಿರುಗಾಳಿಯಿಂದಲಿ ಚಲಿಸುವ
ನಾವೆಯಂತೆ | ಮರವಿನೊಳ್ ಸಿಲ್ಕಿನಾ ಭ್ರಮೆಯಗೊಳ್ಳುವೆ || ಪರರ
ಸ್ತ್ರೀಯರಸಂಗ ಮಾಡಿದ ಕಾಮಿಯಂತೆ | ಮರಳಿಮರಳಿ ನಾನಿದಕೆ
ಮೋಹಿಸುವೆ || ೧ || ಜಾತಿಗೋತ್ರವ ಮೆಚ್ಚಿ ಗುರುವೇದವ ತೊರೆದು
| ಮಾತುಮಾತಿಗೆ ಅಭಿಮಾನ ಪಿಡಿಯುವೆ || ಮಾತೆಯ ನುಡಿಜರಿದು
ಸತಿಯ ನುಡಿಕೇಳಿ | ಸೋತ ಶಶದಂತೆ ಯಮನಿಗೀಡಾಗುವೆ || ೨
|| ತರಕಶಾಸ್ತ್ರವನೋದಿ ಮುರಕಮನೆಯನೆಚ್ಚಿ | ಅರಿಮರುಳನಂತೆ
ಬೊಗಳುವೆ ದೇವಾ || ಅರೆಬಿತ್ತರಿಸಿದ ಧ್ರುಮದ ಮೂಲದಂತೆ | ಆ
ರುವವಿಲ್ಲದೆ ನಿಸ್ಸಾರನಾಗಿರುವೆ || ೩ || ಸಾರಸಾರದ ಮರ್ಮವನ್ನು
ಪೇಳೆನ್ನನು | ಶೇರಿಸಿ ಸುಖಸಾಗರವನ್ನು ನೀನು || ವಾರಿಗಗ್ನಿಗೆ
ಗೆ ವಿರುದ್ಧವದರಂತೆ | ಮಾರಹರನೆ ಯನ್ನಮನವನು ಪುಟ್ಟಿಸಿ || ೪
|| ಘೋರ ಸಂಸ್ಕೃತಿಹರಕೆ ಶೂರಮೂರ್ತಿಯೆ ನೀನು | ಧೀರನೆಂದು
ನಾನು ಭೇರಿನಾದವ ಕೇಳಿ || ಘೋರ ಸಂಸ್ಕೃತಿಯಿಂದ ಬಳಲದೆ ಮ
[illegible] | ಶ್ರೀರಾಮಾರೂಢ ಸ್ವರೂಪ ನೀನೆನ್ನನು || ೫ ||

### ೩೭ ನೇ ಪದ.

( ದಾಟಿ—ಲಿಂಗಪೂಜೆಯ ಮಾಡಿರೊ ಎಂಬಂತೆ. )

ಭಜನೆಯನು ಮಾಡಿರೋ | ಸರ್ವರುಕೂಡಿ | ಭಜನೆಯನು ಮಾಡಿರೋ || ಕುಜನರ ಸಂಗವ ದಾಟುತ ಮನುಜರೆ | ಭುಜಗಭೂಷಣನಾದ ಶಂಭುಶಂಕರನ || ಪ || ಮನಸಿಜನನು ಮೀರುತ | ಧನ ಪುತ್ರಾದಿ | ಕನಸಿನಂತೆ ಕಾಣುತ | ವಿನಯದಿಂದಲಿ ನೀವು ಶಾಂತ ರೊಡನಾಡುತ | ಅನಘಾನಂದನ ತವಕದಿ ಸ್ಮರಿಸುತ || ೧ || ಹಿತ ವಹಿತ ವೆನ್ನುತ | ಧೃಡವಾಗಿ ಶೃತಿಮತವ ಪಿಡಿಯುತ | ಸತತ ಮನದೊಳಗೆ ಶಾಂತಿಯನೆ ಪೊಂದುತ | ಜಿತಕಾಲನ ಸುಖವಬೇಗದಿ ಬಯಸುತ || ೨ || ನಾಲ್ಕುಸಾಧನ ಕೂಡುತ | ತ್ವರೆಮಾಡಿ | ನಾಲ್ಕು ಕರ್ಮವ ಜರಿಯುತ || ನಾಲ್ಕೊಂದು ಲಕ್ಷಣವ ನೋತು ವಿಚಾರಿಸುತ | ಕಾಲಕಾಲನ ನೀವು ಸರಸದಿನೋಡುತ || ೩ || ಜೀವ ಬಹ್ಮ ಜಗತ್ತು | ಈ ಮೂರನು | ಓವಿ ವಿಚ್ಯಾರಿಸುತ | ಜೀವ ಬ್ರಮ್ಹರ ರೂಪ ಏಕಾಗಿ ಕಾಣುತ | ದೇವ ಪರಮಾತ್ಮ ನಾನೋರ್ವನೆನುತ || ೪ || ಸೂಕ್ಷ್ಮ ರೂಪನೆನುತ | ನಾಸರ್ವಕೆ | ಸಾಕ್ಷಿಯಾತ್ಮನೆನುತ || ಮೋಕ್ಷಾಂಗನೆಯುಕೂಡ ಸರಸದಿ ಲೋಲಾಡುತ | ಮೋಕ್ಷಾರೂಢ ರಾಮನ ಸುಖವ ಸವಿಯುತ || ೫ ||

### ೩೮ ನೇ ಪದ.

( ದಾಟಿ—ಇನ್ನಾದರೀಭವಕೆ ಹೇಸಬಾರದೆ ಮನುಜ ಎಂಬಂತೆ. )

ನವವಿಧ ಭಕ್ತಿಗಳನು ಸಾಧಿಸಿದವನು | ಪವಿತ್ರ ಕೈವಲ್ಯಪೊಂದುವನಿದು ನಿಜ || ಪ || ಸತತ ಪರಮಾತ್ಮನ ಲೀಲೆಯನ್ನಾಲಿ | ಸುತ ಸ್ಸಂತೋಷಿಸುವದೆ ಶ್ರವಣ ಭಕ್ತಿ || ಹಿತದಿ ಸಾಯುಜ್ಯ ಪದವಿಯನು ಪರಿ | ಕ್ಷಿತರಾಜನು ಪಡೆದಿರುವ ನಿದರಿಂ || ೧ || ಜಡಮತಿರಹಿತನ ಮಹಿಮೆಗಳನ್ನು | ಎಡೆಬಿಡದೆ ವರ್ಣಿಸುವದೆ ಕೀರ್ತನವು || ಸಡಗರದಿಂ ನಾರದನಿದೇ ಭಕ್ತಿಯಿಂ | ಕಡು ಶ್ರೇಷ್ಠಾನಂದ ಮುಕ್ತಿ ಪಡೆದನು || ೨ || ನಿರಂತರೀಶ್ವರನನ್ನು ಹರುಷದಿಂ | ಸ್ಮರಿಸುವದೆ ಸ್ಮರ

ಣ ಭಕ್ತಿಯೆನಿಪುದು || ಪರಿಪೂರ್ಣ ಚಿದ್ಘನಾನಂದವೆನಿಸಿದ | ಪರಮ ವಸ್ತು ಪೊಂದಿದನು ಪ್ರಲ್ಹಾದನಿದರಿಂ || ೩ || ವರನ ಶೇವೆಯು ಹಸಿ ತೃಷಿಗಳಿಲ್ಲದೆ | ನಿರುತ ಜರಗಿಸುವದೆ ಪಾದಶೇವನ || ಪರತರ ಮೋದವನೀ ಪಾದಶೇವನೆಯಿಂ | ಚೆರೆದಳು ಲಕ್ಷ್ಮಿಯು ಅತಿಹರುಷದಿಂದ || ೪ || ಪರಮ ಮೂರ್ತಿಯನು ಗಂಧಾದಿಯಿಂದಲಿ | ಹರುಷದಿಂದಾರ್ಚಿಸುವದಾರ್ಚನ ಭಕ್ತಿ | ಪರಮ ವೆನಿಪ ನಿರ್ವಾಣದಾನಂದವನು | ಕರಿಗೊಂಡನು ಪೃಥುರಾಜನೀ ಭಕ್ತಿಯಿಂ || ೫ || ಸುರರೊಡೆಯನ ಪಾದ ಪಂಕೇರುಹಗಳಲಿ | ಶರೀರವ ನೀಡಾಡುವದೆ ವಂದನ ಭಕ್ತಿ ಸರಸವಾಗಿದೆ ವಂದನ ಭಕ್ತಿಯಿಂದ | ಚಿರಸುಖವನು ಪಡೆದನು ಅಕ್ರೂರನು || ೬ || ಸುರನರಪಾಲನಲಿ ಕರಣತ್ರಯದಿಂದ | ಪರಮ ಕಿಂಕರ ಭಾವದಿಮಿರುವದೆ ದಾಸ್ಯ || ನಿರುತಿದೆ ದಾಸ್ಯನಾಮಕ ಭಕ್ತಿಯಿಂ | ಜರಗಿಸಿ ಮುಕ್ತಿಪಡೆದನು ಮಾರುತನು || ೭ || ಅನವರತ ಧರಣಿಪಾಲನನು ಕೂಲ | ತೆನಿಸಿಹುದೆ ಸಖ್ಯನಾಮಕ ಭಕ್ತಿಯು || ಪಿಸುತ ಪಾರ್ಥನಿಗೆ ಸಖ್ಯ ಭಕ್ತಿಯಿಂದ | ಚಿನುಮಯಸುಖಬ್ರಹ್ಮವನು ಪೊಂದಿದನು || ೮ || ತನುಮನಧನ ಪ್ರಾಣಚಯವೆಲ್ಲವ | ವಿನುತಮೂರ್ತಿಗರ್ಪಿಸುವದಾತ್ಮಾರ್ಪಣ || ಬಿನದಿ ಸಾಧಿಸಿದನೆ ಬಲಿಯುನಿರುಪಮ | ಅನಘ ಶ್ರೀರಾಮಾರೂಢನ ಪೊಂದಿದನು ||೯||

೩೯ ನೇ ಪದ.

( ದಾಟಿ—ಶ್ರೀಗುರುವೆಂದೆಂಬ ವೈದ್ಯನೆನ್ನಯಭವ ಎಂಬಂತೆ. )

ಪರಬ್ರಹ್ಮದೊಳು ವರದ್ವೈವತ್ವವಲ್ಲದೆ | ಹರಿಹರಾದಿಯೋಳಿಲ್ಲ ವಿವರಿಸಿ ನೋಡಲು || ಪಲ್ಲ || ಲೋಕೇಶನೊಳು ವರದ್ವೈವತ್ವವುಂಟೆನಲು | ಏಕದಂತನನ್ನು ಸ್ತೋತ್ರಮಾಡಿಹನು || ಚಕ್ರಪಾಣಿಯಲ್ಲಿ ಉಂಟೆನಲೀತನು | ಶಾಂಕರಿಪತಿಯನಾರ್ಚನೆಗೈದಿಹನು || ೧ || ಲಂಬೋಧರನಲ್ಲಿ ಉಂಟೆಂದೆನಲಿವನು ತ್ರ್ಯಂಬಕನಿಗೆ ತನಯನೆಂದೆನಿಸಿಹನು || ಅಂಬಿಕೆಯೋಳುಂಟೆನಲಿವಳಶ್ವತ | ಕಂಬಳಧರನ ಪಾಣಿ

ಗ್ರಹಳೆನಿಸಿಹಳು || ೨ || ಹರಿದಶ್ವನೊಳುಂಟೆನಲಾ ಜ್ಞಾಂಕಿತನಿಹ | ವಿರಾಟನಲ್ಲೆನಲು ಜರಿಜಂತುಗಳಹುದು || ಪರಕಿಸಲೆಲ್ಲ ಸುರರೊಳು ದೈವತ್ವವಿಲ್ಲ | ಗುರು ರಾಮಾರೂಢರ ಸ್ವರೂಪದೋಳಲ್ಲದೆ || ೩ ||

### ೪೦ ನೇ ಪದ.

( ದಾಟಿ—ಮಂಗಲಂ ಜಯಕರ ಗಂಗಿಯಜಟಧರ ಎಂಬಂತೆ. )

ಮಂಗಲದಾರುತಿ | ಮಂಗಲಮೂರ್ತಿಗೆ || ಮಂಗಲಾಂಗಿಯರೆ | ಮಂಗಲೆಂದೆತ್ತಿರೆ || ಪಲ್ಲ || ಭವಭಯನಾಶಗೆ | ಭವರೋಗವೈದ್ಯಗೆ || ಶಿವಕುಲಜಾತಗೆ | ಪವಿತ್ರಪಾದಗೆ || ೧ || ಅಗಣಿತಮಹಿಮಗೆ | ಜಗದ್ರೂಪಾತ್ಮಗೆ | ಜಗಿಜಗಿಸುವನಿಗೆ | ನಿಗಮಾತೀತಗೆ || ೨ || ಬ್ರಹ್ಮಾತ್ಮೈಕ್ಯಗೆ | ಬ್ರಹ್ಮಾಂಡನಾಶಗೆ | ಬ್ರಹ್ಮಾದಿರೂಪಗೆ | ಬ್ರಹ್ಮಾನಂದಗೆ || ೩ || ಅನುಪಮ ತೇಜಗೆ | ಅನಘಾನಂದಗೆ | ಅನಮಿತಗಾತ್ರಗೆ | ಮನುಮುನಿವಂದ್ಯಗೆ || ೪ || ಆದ್ಯಂತರಹಿತಗೆ | ಸಾದರಬೋಧಗೆ | ವೇದಾದಿಸ್ತುತ್ಯಗೆ ವಾದರಹಿತಗೆ || ೫ || ಭೋಗವತ್ಯಾಗಿಗೆ | ರಾಗವಭಂಗಗೆ | ಯೋಗಿಜನಸಂಗಗೆ | ಯೋಗದಾನಂದಗೆ || ೬ || ಪರತರರೂಪಗೆ | ಪರಮಾನಂದಗೆ | ಸುರನರವಂದ್ಯಗೆ | ಗುರು ರಾಮಾ ರೂಢಗೆ || ೭ ||

ಶ್ರೀಮತ್ಸಚ್ಚಿದಾನಂದ ಸಂಯಮಿ ಶಿಖಾಮಣಿ ಶ್ರೀಯುತ ಪರಮಹಂಸ ಸದ್ಗುರು ರಾಮಾರೂಢರ ಪೂಜ್ಯಪಾದ ಶಿಷ್ಯ ಶ್ರೀಗುರು ಸಂಗಮೇಶ್ವರ ಕವಿಗಳಿಂದ ಮುಮುಕ್ಷುಜನ ಹಿತಾರ್ಥವಾಗಿ ವಿರಚಿಸಲ್ಪಟ್ಟ ಕೈವಲ್ಯ ಪದ್ಧತಿಯೊಳು ಶಿವಕಾರುಣ್ಯಸ್ಥಲವು.

ಸಮಾಪ್ತ ಮಾದುದು.

|| ಇತಿ ಶುಭಮಸ್ತು ||



ಶ್ರೀಮತ್ಸದ್ಗುರು ರಾಮಾರೂಢಾ ಯನ್ನಮಃ

# ಜೀವಸಂಬೋಧನ ಸ್ಥಲ.

## ೧ ನೇ ಪದ.

( ದಾಟಿ— ಜಗದೊಳುನ್ನತವಾದ ಯೋಗಸಾಧಕ ವೆಂಬಂತೆ. )

ಶ್ರೀಗುರುವರೇಣ್ಯನ ಕೃಪಾಕಟಾಕ್ಷ ಪಡೆ | ಬೇಗದಿ ಮನುಜನೆ ವಿಷಯಗಳಳಿದು || ಪಲ್ಲ || ಧನಧಾನ್ಯ ವಸ್ತ್ರ ಭೂಷಣವನು | ಕನಕ ಮಣಿ ವಜ್ರ ಮೊದಲಾದವೆಲ್ಲವನು || ಮನೆ ಕ್ಷೇತ್ರಶ್ವ ಗಜ ಉಷ್ಟ್ರ ಮೊದಲಾದ | ವನು ತವೆ ಜರಿದು ನಿರ್ವಿಷಯನಾಗಿ || ೧ || ಸತಿ ಸುತ ಮಿತ್ರ ಜಾಮಾದಾದಿಗಳನು | ಪಿತ ಮಾತೆ ಪಿತಾಮಹರಾದಿಗಳನು | ಸತಿ ಸುತರ ಸಂಬಂಧಿಯಾದವರನು | ಸತತ ದುಃಖದಾತರೆಂದರಿದುಳಿದು || ೨ || ತನುವಿಂದ್ರಿಯವನು ಪಂಚಪ್ರಾಣಗಳನು | ಮನಸಾಳಿಗಳನು ಜಾತಿಗೋತ್ರವನು || ಉನ್ನತ ಛಂದಸ್ಸು ಜೋತಿಷ್ಯಾದಿಗಳನು | ಸನ್ನುತ ಶೃತಿ ಸೂಕ್ತಿ ಸ್ಮೃತಿಗಳನಳಿದು || ೩ || ಗುರು ವಚನವೆ ಶೃತಿ ಸ್ಮೃತಿ ನಿಚಯಗಳು | ಗುರುವಚನದಿಂದ ಸಕಲಾರ್ಥ ಸಿದ್ಧಿಯು || ಗುರುಕೃಪೆಯಿಲ್ಲದೆ ತ್ರಿಲೋಕದೊಳಗೊಂದು | ಪುರುಷಾರ್ಥವಿಲ್ಲೆಂದು ಶೃತಿಯೊರೆಯಲು || ೪ || ವರಮುಕ್ತಿಗೆ ಗುರುಕೃಪೆಮೂಲವೆಂದು | ಪರಮ ವೇದಾದಿಗಳು ಸಾರಿಕೂಗುವವು || ವರಯೋಗಿಂದ್ರನುರುತರ ಕರುಣಿಯಾದ | ಗುರು ರಾಮಾರೂಢರ ಚರಣಕೆರಗಿ || ೫ ||

## ೨ ನೇ ಪದ.

( ದಾಟಿ—ಬಸವಾದಿ ಪ್ರಮಥರ ಚರಣಸಾರಸಗಳಿಗೆ ಎಂಬಂತೆ. )

ನೀನೆಂದಿಗೆ ಗತಿಗಾಣುವಿ ಮಾನವ | ನಾನು ನನ್ನದು ಎಂಬ ಭಾವನಳಿಸದೆ || ಪಲ್ಲ || ರೇತೊ ರಕ್ತ ಮೂತ್ರ ಮಜ್ಜ ಅಸ್ತಿ ಮಲ | ಪಾತಕಗಳಿಂದ ತುಂಬಿರ್ದ ದೇಹವನು || ಮಾತು ಮಾತಿಗನು ಕರಿ

ಸುವ ಹಂಕಾರ | ಜಾತಿಸೂತಕವಾನೆಂಬ ಬಗೆಕಳೆಯುದೆ || ೧ || ಒಂ
ದೊಂದವಸ್ಥೆಯೋಳೊಂದೊಂದು ಶರೀರವು | ಒಂದೊಂದವಸ್ಥೆಯೊ
ಳೊದೊಂದು ಗುಣವು || ಒಂದೊಂದವಸ್ಥೆಯೋಳೊಂದೊಂದು ಶಕ್ತಿ
ಯು | ಚಂದದಿಮಿವ್ರುಗಳ ಮರ್ಮವರಿದೆ || ೨ || ಸತ್ಯ ಮಿಥ್ಯ ವಸ್ತು
ಗಳನು ಬೇರ್ಪಡಿಸಿ | ಸತ್ಯ ವಸ್ತುವನು ಚನ್ನಾಗಿ ಪಿಡಿಯದೆ | ನಿತ್ಯಮು
ಕ್ತನಾದ ಗುರು ರಾಮಾರೂಢರ | ಭೃತ್ಯನಾಗಿ ಕರುಣಪಡೆಯು
ತನಕ || ೩ ||

೩ ನೇ ಪದ.

( ದಾಟಿ—ಶ್ರೀಗುರುವೆಂದೆಂಬ ವೈದ್ಯನೆನ್ನಯ ಭವ ಎಂಬಂತೆ. )

ಎಷ್ಟು ಭ್ರಮೆಯಲೆ ಜೀವನೆ ನಿನಗೆ ನಿನ್ನಷ್ಟು ಮೂರ್ಖರನ
ನಾ ನೆಲ್ಲಿಯು ಕಾಣೆ || ಪಲ್ಲ || ಕ್ಷೇತ್ರ ಗ್ರಹ ದ್ರವ್ಯ ವಸನಾದಿ ವಾ
ನ | ಮಾತೃ ಪಿತೃ ಮಿತ್ರ ಭಾರ್ಯಾದಿ ನಿಕರವ | ಗೋತ್ರ ಸೂತ್ರ ಜ
ತಿಯೆಲ್ಲವು ನಿನಗಿನಿತು | ಮಾತ್ರ ಸಂಬಂಧಿಸದೆ ಮಮ ಇದವೆಂಬೆ
೧ || ತನು ವೃದಶವಿಂದ್ರಿ ಅಸು ನಿಚಯವನು | ಮನಸು ಬುದ್ಧ್ಯಹ
ಕಾರ ಚಿತ್ತಂತಃಕರಣ | ವನು ಮೊದಲ್ಮಾಡಿ ತತ್ಸಂಬಂಧಿಯಾದ
ಅನಲಾನಿಲಾದಿಗಳ ಹಮಿದಮೆಂಬೆ || ೨ || ಕರ್ಮದ ಸಂಬಂಧ ನಿ
ಗಿ ನಿತಿಲ್ಲದೆ | ಕರ್ಮವ ಮಾಡಿ ನಾ ಫಲಭುಕ್ತನೆಂಬೆ | ವರ್ಮ ಧಮ
ಕ್ರೋಧ ಲೋಭ ಮೋಹಾದಿಗಳ | ಮರ್ಮವರಿಯದೆ ನೀನ ಹಂ
ರ್ತನೆಂಬೆ || ೩ || ಸತ್ತು ಚಿತ್ತು ನಿರ್ದ ಅಸತ್ತು ಜಡವೆಂಬೆ | ನಿ
ಪೂರ್ಣನಿರ್ದು ಅನಿತ್ಯಣುವೆಂಬೆ || ಅತ್ಯಾನಂದನಿರ್ದು ನಾನತಿ ದುಃ
ಯೆಂಬೆ | ಪ್ರತ್ಯಗಾತ್ಮನಿರ್ದು ಪರಾಕ್ ನಾನೆಂಬೆ || ೪ || ಲೋಕದೆ
ಳಗೋರ್ವ ನರಮನುಷ್ಯನು | ಮೂಕನಂತಿರಲತಿ ಹಾಸ್ಯಮಾಳ್ಪ
|| ಲೋಕಕೀಶನಾದ ಶ್ರೀರಾಮಾರೂಢನ | ಜೋಕೆಗಾಣದಿರು
ನಿನ್ನೆಷ್ಟು ಹಳಿವರು || ೫ ||

## ೪ ನೇ ಪದ.

( ದಾಟಿ—ಮನವೆಂಬ ಮರ್ಕಟವ ತಡೆಯಲಾರೆನು ಎಂಬಂತೆ. )

ವಿವರಿಸೊ ಮನುಜನೆ ಸಕಲ ವಿಷಯಗಳಂ | ಜವದಿಂದೀ ಭವಕೆ ಕಾರಣವೇನೆಂದು || ಪಲ್ಲ || ತೋರಿ ತೊಡೆಯುವ ಶರೀರವೆಲ್ಲಿಂದ | ತೋರಿ ಬಂಧುರವಾಗಿ ಕಾಣುತ್ತಿರುವದೆಂದು || ಸಾರವಿಲ್ಲದ ದೇಹದೊಳು ಭೋಗವನು | ದಾರು ನೆಲಸಿ ಅನುಭವಿಸುವರೆಂದು||೧| ಐದು ತನ್ಮಾತ್ರಗಳೇನನು ಹೊಂದಿಕೊಂಡು | ಐದೆ ಜೀವರುಗಳಿಗೆ ಮೋಹ ಮಾಡುವವೆಂದು || ಸದಮಳವಲ್ಲದ ಭೂತಗಳೆಲ್ಲಿಂದ | ಉದಯವಾಗಿ ತೋರುತ್ತಿರುವವೆಂದು || ೨ || ನಡೆ ನುಡಿಯುವ ಕೇಳುವ ಪರಿಕಿಸುವ | ಅಡಿಗಡಿಗೆ ನೋಡುವ ಧರ್ಮವು ದಾರದೆಂದು || ಒಡಲೊಳಗೆನ್ನನು ಪ್ರವೇಶ ಮಾಡಿಸಿ | ತಡಮಾಡದೆ ಭೋಗಕೊಡುವವರಾರೆಂದು || ೩ || ಜಗತ್ತು ಜೀವೇಶರೆಂದು ಮತ್ತೆ | ಜಗದೊಳು ಸತ್ಯವು ಮಿಥ್ಯವು ಯಾವದೆಂದು || ನಿಗಮಾಗಮಗಳು ಯಾವ ಕಾರಣದಿಂದೀ | ಜಗದೊಳುದ್ಭವವಾಗಿ ಶೋಭಿಸವೆಂದು || ೪ || ಘೋರರೂಪವಾದ ಪರಿಭವದ ನಾಶಕೆ | ಧೀರವಾದಂಥ ಮಾರ್ಗವು ದಾವದೆಂದು || ಕ್ಷೋರತನುವ ಧರಿಸಿ ಸಾರ್ಥಕವೇನೆಂದು | ಶ್ರೀರಾಮಾಲೂಧರ ಸ್ವರೂಪವೇನೆಂಸು || ೫ ||

## ೫ ನೇ ಪದ.

( ದಾಟಿ—ಗುರುವರನೆ ನಿನಗಿಂತರಧಿಕರಾರುಂಟು ಎಂಬಂತೆ. )

ಯಾರೆಂತು ವರ್ಣಿಸಲಳವಹುದು ಈಸಂ | ಸಾರದ ಬಾಧೆಯನು ನೋಡುಮನುಜ || ಪ || ಜನನಿಯ ಗರ್ಭದಿಂ ಪೊರಮಡುವ ದುಃಖ | ಜನಸಿದಮೇಲೆ ಬೆಳೆಯುವದೊಂದು ದುಃಖ || ಜನಿಸಬೇಕಾದರೆ ಮಾತೆಗತಿ ದುಃಖ | ಅನವರತಲ್ಲಿಂದ ಹಸಿವು ತೃಷಿ ದುಃಖ || ೧ || ಹಸುಳವಸ್ಥೆಯ ದಾಂಟಿ ಕೌಮಾರವಸ್ಥೆಗೆ | ಪಸರಿಸಬೇಕಾದ ರಕ್ಷಂತ ದುಃಖ || ಮಿಸುಪ ಪೌಗಂಡ ಕಿಸೋರವಸ್ಥೆಯ ದುಃಖ | ಪೆ

ಸರಾದಿಯಾಗಿ ಭ್ರಮೆಗಳ ದುಃಖವತ್ತ್ || ೨ || ಯೌವ್ವನವಸ್ಥೆಗೆ ಬರಲು ಕಾಮಾದಿಗಳ ದುಃಖ | ಧಾವಿಸಿಬಂದು ಮುಸುಕುವವಾಗಲೆ || ಯೌವ್ವನವಸ್ಥೆ ಮೀರಿ ಜರಾವಸ್ಥೆಯು ಬರಲು | ಓವಿ ರೋಗಾದಿಗಳು ದುಃಖ ಕೊಡುವವು || ೩ || ಒಂದು ಜಲ್ಮದೊಳಿಷ್ಟು ಬಗೆಯ ದುಃಖಗಳು | ಹಿಂದಿನನಂತ ಜಲ್ಮದೊಳೆಷ್ಟು ಕಷ್ಟಗಳು || ಮಂದಮನುಜ ನೀನಿನಿತೆಲ್ಲ ವಿವರಿಸದೆ | ಹಂದಿಕುನ್ನಿಗಳಂತೆ ವ್ಯರ್ಥ ಕಾಲಳಿವೆ || ೪ || ಎಂತು ಪರಿಕಿಸಲು ಈ ದೇಹದೊಳು ಸುಖವಿಲ್ಲ | ಅಂತರಂಗದೊಳು ವಿವರಿಸಿ ನೋಡಿ | ಕಂತುಹರನಾದ ಗುರು ರಾಮಾರೂಢನ || ಸಂತತಿಯುವೆರೆದರೆ ಅದುವೆ ಸುಖವು || ೫ ||

### ೬ ನೇ ಪದ.

( ದಾಟಿ—ಏನುಪಾಯವು ಮಾಡಲಿ ಎಂಬಂತೆ. )

ದಾರು ನಾಶಮಾಡಲು | ಸಾಸ್ವಾಮೀಸಂ | ಸಾರದ ತಾಪವನು || ಘೋರರೂಪವಾದ ಇಹಲೋಕದ ತಾಪ | ಮೀರಿದ ತಾಪವು ಅಂತಕನೆಡೆಯೊಳು || ಪ || ನಿರುತ ರುಜಗಳತಾಪ | ಮೀರಿದತಿ | ಪರಲೋಕಿಚ್ಛೆಯು ತಾಪ || ಸುರರನಿಚಯುಕೆ ಯಾಚಿಸುವತಾಪ | ಪರತರಪಾದಂಥ ಕ್ಷುಧಾದಿಗಳತಾಪ || ೧ || ಪಂಚಕ್ಲೇಶದ ತಾಪ | ಸಂಚೈಸಿದ | ಪಂಚಕೋಶಗಳ ತಾಪ | ಮಿಂಚಿನಂತೆ ಕಾಣಿಸುವ ಪ್ರಪಂಚದೊಳು | ವಂಚನೆ ಮಾಡುವದತಿ ಘೋರತಾಪ || ೨ || ಏಳುವೆಸನತಾಪ | ಸುಖದಿಂದ | ಬಾಳಬೇಕೆಂಬ ತಾಪ || ಪಾಳುವಿಷಯುಕೆ ಮೆಚ್ಚುವದತಿ ತಾಪ | ಕಾಳಾಗಿ ಕಾಡುವ ಜನ್ಮಮರಣ ತಾಪ || ೩ || ಯಮನೆಳೆಯುವ ತಾಪ | ಎಳದೊಯ್ದು | ಅಮೇಧ್ಯದಿಡುವ ತಾಪ || ಚಮ್ಮಟಕರಗಸ ಕತ್ತರಿ ಸಲಕಿವು | ಈಮೊದಲಾದವುಗಳಿಂ ಬಾಧಿಪ ತಾಪ || ೪ || ಕಾದಕಲ್ಲಿನ ಗಾಣದೊ | ಳ್ಹಾಕುವ ತಾಪ | ಕಾದೆಣ್ಣೆ ಸುರಿವ ತಾಪ | ಕಾದ ಸೀಸವನ್ನು ಬಾಯೊಳ್ಹಾಕುವ ತಾಪ | ಕಾದು ಸುಬಿನೊಳು ಉರುಳಿಸುವ ತಾಪ || ೫ || ಕಳ್ಳಿಯ ಹಾಲನು ನೇತ್ರ |

ದೋಳ್ಸುರುವಿ | ಮುಳ್ಳಿನಿಂ ಬಡಿವತಾಪ || ಮುಳ್ಳಿನೊಳಗೆ ದೇಹ
ವನ್ನೆಳೆಯುವ ತಾಪ | ಕೊಳ್ಳಿಗಳಿಂದಲಿ ದಹಿಸುವ ತಾಪ || ೬ ||
ಹುಲಿಕರಡಿ ಹಂದಿ ಸರ್ಪ | ಮೊದಲಾದ | ಕ್ಷುಲ್ಲ ಪ್ರಾಣಿಗಳಿಂದ ||
ಸೊಲ್ಲುಸೊಲ್ಲಿಗೆ ಬಾಧೆಗೊಳಿಸುವದತಿ ತಾಪ | ಬಲ್ಲಿದಾರೂಢ ರಾಮು
ನೀನಿದನಳಿಸು || ೭ ||

## ೭ ನೇ ಪದ.

( ದಾಟಿ—ಗಂಡನಮಾಡಿಕೊಂಡೆ ಮುಪ್ಪಾಗದಂಥಾ ಎಂಬಂತೆ. )

ಎಷ್ಟು ಮೂರ್ಖನು ನೀನು | ದುಷ್ಟ ಮನುಜ | ಇಷ್ಟಿಲ್ಲೊ ಸು
ವಿಚಾರವು || ಕಷ್ಟಕೊಡುವ ಪತ್ನಿ ಮೊದಲಾದವರೆಲ್ಲರ | ಇಷ್ಟರೆಂದು
ನಂಬಿ ಭ್ರಷ್ಟನಾಗುವಿಯಲ್ಲೊ || ಪ || ಹೆಂಡತಿಯನ್ನು ನೀನು | ನನ್ನ
ವಳೆಂದು | ಕಂಡು ಮೋಹಮಾಡುವಿ || ದಂಡಧರನು ಬಂದು ಎಳೆ
ದೊಯ್ವಕಾಲದಲಿ | ಗಂಡ ನನ್ನವನೆಂದು ಬಂದು ಬಿಡಿಸುವಳೆ || ೧
|| ಮಕ್ಕಳೆನ್ನವರೆಂದು | ಮೆಚ್ಚಿ ನೀನು | ಅಕ್ಕರದಿ ರಕ್ಷಿಸುವಿ || ವಕ್ಕರ
ದಿಂದ ಮೆರೆವ ಯೌವ್ವನ ಕಾಲದೊಳು | ಜಕ್ಕನೆಜರಿದು ಪೋಗುತಿ
ರ್ಪರು ನಿನ್ನ || ೨ || ನೆಂಟರು ಆಪ್ತರನ್ನು | ಸುಖದಾತರೆಂ | ದಂಟು
ತ್ತಿರುವನಕೆಲ್ಲ ನೆಂಟರು ಇಷ್ಟರು | ಗಂಟಿಲ್ಲ ತೀರಿದರೆ ನಿನಗೆ ವೈರಿಗ
ಳು || ೩ || ಪುರುಳಿಲ್ಲ ಪುರುಳಿಲ್ಲ | ಸಂಸಾರದಿ | ಹರುಷ ಪಡೆಯಲಿ
ಕ್ಕೆ || ಮರುಳತನದಿ ಮೆಚ್ಚುವದಿದು ನಿನಗೆ | ಬೆರಳಿಕ್ಕಿ ನೀರಿನೊಳು
ನೆಕ್ಕಿದಂತಿಹುದು || ೪ || ಈಗಲಾದರೀ ಮೋಹ | ಬಿಟ್ಟುಬಿಟ್ಟುನೀನು |
ಯೋಗಾನಂದ ನೆನಿಸಿದ | ಶ್ರೀಗುರು ರಾಮಾರೂಢನನು ಮರೆಪೊಕ್ಕು
| ಬೇಗದಿಂದ ಸುಖಸಾಗರವನು ಕೂಡು || ೫ ||

## ೮ ನೇ ಪದ.

( ದಾಟಿ—ಮರೆಯದಿರು ಮರೆಯದಿರು ಎಲೆಮಾನವಾ ಎಂಬಂತೆ. )

ಅಹ ಎಂಥ ವಿಷಯವೊ ಏನೊ | ಈ ಸ್ತ್ರೀಯು | ಸಹಜದಿಂ
ದೀ ನರರ ದಹಿಸಿ ಬಿಡುವದು || ಪ || ನೇತ್ರಗಳಿಂ ನೋಡಿದರೆ |

ಗಾತ್ರವೆ ನಡಗುವದು | ಶ್ರೋತ್ರಗಳಿಂ ಕೇಳಿದರೆ ತಳಮಳಿಸುವದು || ಗಾತ್ರದಿ ಮುಟ್ಟಿದರೆ | ಗೋತ್ರವನಳಿಸುವದು | ಪಾತ್ರನಾದರಂತು ಜಾತಿಯನೆ ಕೆಡಿಸುವದು || ೧ || ಮನಸಿನಿಂ ನೆನೆದರೆ | ಮನೀಕ್ಷೆಯು ಭ್ರಮಿಸುವದು | ಮನಸೋತರಂತು ಗುಂಗವನೆ ಮಾಡುವದು || ಮನಸಿನಿಂದೊಮ್ಮೆ | ಬಿನದಿ ಕೂಡಿದರೆ | ಮನೆಯನೆ ತೊರಿಸಿ ಪಾಳುಮಾಡುವದು || ೨ || ಸುರೆಯು ಕುಡಿಯದೆ | ಮರುಳ ನೆನಿಸದು | ಸರಸದಿ ನೋಡಿದರೆ ಮರುಳು ಮಾಡುವದಿದು || ಶಿರೆಯಾದರಂತಿದು | ಪುರುಷಾರ್ಥ ನಾಲ್ಕನು | ಉರುಳಿಸಿ ಬಿಡುವದು ಸಹಜ ಸಹಜ || ೩ || ಕಬ್ಬಿನಗಾಣದಂತೆ | ಮಬ್ಬಿನ ಜನರನ್ನು | ಸಿಬಿಕೆಯಂತೆ ಮಾಡಿ ಸುಡುವಂತೆ ಮಾಡುವದು || ಒಬ್ಬರಿಗೆ ಶಿಲ್ಕದ | ಸುಂಬ ನಿಸ್ಸುಂಬರಿಗೆ | ಮಬ್ಬು ಹಿಡಿಸವರ ಪ್ರಾಣವನೆ ಹೀರಿತು || ೪ || ಗಾರುಡಿಗನಂತಿದು | ಶೂರಪುರುಷರನು | ವಾರಿಗಂಣಿಲೆ ನೋಡಿ ವಶಮಾಡಿಕೊಂಬುದು || ಯಾರಿಗೂ ತಿಳಿಯದು | ಈ ವಿಷಯವಿಂತೆಂಬುದು | ಧೀರಗುರು ರಾಮಾರೂಢರಿಂಗಲ್ಲದೆ || ೫ ||

೯ ನೇ ಪದ.

( ದಾಟಿ — ನಿನ್ನ ನಾನೇನು ಬೇಡಲಿದೇವ ಕೊಡಲೆನಗೆ ಎಂಬಂತೆ. )

ಅಹಾ ಏನು ಕೌತುಕವಿದು ಕಾಮನೊಡನಾಟ | ಬಹು ಮೋದವತೋರಿ ನರರ ಘಾಸಿಪನು || ಪಲ್ಲ || ಲಲನೆಯರ ದೇಹವು ಮಲಮೂತ್ರದಿಂ ತುಂಬಿ | ತುಳುಕುತಿದ್ದರದನು ಕಾಣಿಸದೆ ಮತ್ತೆ || ಬಲುಸುಚಿಯೆನೆ ತೋರಿ ಮಲವಾಸಿಯನೆ ಮಾಡಿ | ಕಲಂಕರಹಿತ ಶಿವಸ್ತುತಿಯ ಮರಿಸುವನು || ೧ || ಕೆಟ್ಟ ಸ್ತ್ರೀಯಿದ್ದರು ಧಿಟ್ಟತನವ ತೋರಿ | ತಟ್ಟನೆ ಆವಳ ವಶಮಾಡಿಸಿ ಮಗುಳೆ || ಕುಟಿಲಬುದ್ಧಿಯನು ಪುಟ್ಟಿಸಿ ಜವದಿ | ನಿಟಿಲ ಶ್ರುತಿಗಳನು ಮರಿಸಿ ಬಿಡುವನು || ೨ || ಭಕ್ತಿಪೂರ್ವಕವಾಗಿ ಮುಕ್ತಿದಾತನ | ಉಕ್ತಿಯನೆ ಕೇಳುವ ಭಕ್ತನ ತೆರದಿ || ಮುಕ್ತಿನಾಶ ಮಾಡುವ ಶಕ್ತಿಯುಕ್ತಳ | ಉಕ್ತಿಯನೆ ಕೇಳುವಂತೆ ಮಾಡುವನು || ಊರಿಗಧಿಕನಾದರಸನ ವಾಣಿಯನು | ಮೊ

ರಿದರೆ ಮೀರಲು ಬರಬಹುದು || ನಾರಿಯರ ಮಾತೊಮ್ಮೆ ಮೀರಲಾ ರದಂತೆ ಶೂರಪುರುಷನ ಸಹ ಸ್ತ್ರೀವಶಮಾಡುವನು || ೪ || ನೀತಿಗು ಣಗಳ ಕೆಡಿಸಿ ಮಾತುಮಾತಿಗಿವನು | ಪಾತಕವನೆ ಹೊರಿಸಿ ಭವಕೆ ನೂಕುವನು || ಪಾತಕವ ಮೀರಿದ ಸೂತಕವ ತ್ಯಜಿಸಿದ | ವೇದಸ್ತು ತ್ಯಾರೂಢ ರಾಮನೋಳಿವ ದೂರ || ೫ ||

## ೧೦ ನೇ ಪದ.

( ದಾಟಿ—ಗುರುವರನೆ ನಿನಗಿಂತರಧಿಕರಾರುಂಟು ಎಂಬಂತೆ. )

ಎಷ್ಟು ವರ್ಣಿಸಲಿ ಈ ಲಕ್ಷ್ಮಿಯ ಗುಣಗಳ | ಕಷ್ಟಕೊಡುವದ ಕೆ ಬಹು ಶ್ರೇಷ್ಠಳಿವಳು || ಪ || ಕಷ್ಟಗಳೆಂಬ ಸರ್ಪಿಗೆ ಗುಹೆಯಾಗಿ ಶೋಭಿಪಳು | ಶಿಷ್ಟಗಿರಿಯಾಗಿಹಳು ಮೋಹಗಳೆಂಬಾನೆಗೆ || ಶಿಷ್ಟ ಕರ್ಮಗಳೆಂಬ ಕಮಲಕೆ ರಾತ್ರಿಯಳು | ದುಷ್ಟ ಕರ್ಮಗಳೆಂಬ ನೈದಿ ಲೆಗೆ ಬೆಳ್ದಿಂಗಳು || ೧ || ಶುಭದೃಷ್ಟೆಂಬ ದೀಪಕೆ ಬಿರುಗಾಳಿಯಾಗಿ ಹಳು | ಮಬ್ಬು ಮನಸೆಂಬ ತೆರೆಗೆ ಮಹಾನದಿ ಇವಳು || ಸಂಭೋ ಗ ಸಂಭ್ರಮ ಮೇಘಗಳಿಗಿವಳು | ಅಂಬರರೂಪಾಗಿ ಶೋಭಿಸುತಿರು ವಳು || ೨ || ದುರ ವಿಚ್ಛಾರ ವಿಷಲತೆಗೆ ಮಹಾರಣ್ಯವಾಗಿಹಳು | ವೈರುಗಳಿಗೆಗದ್ದೆ ಇವಳು ವಿಕತ್ಪಿಂಬ || ನೆರೆ ಲೋಭವೆಂಬ ಗರಳಕೆ ಉಗರದಂತಿಹಳು | ವಿರತಿಯೆಂಬ ತಾವರೆಗೆ ಹಿಮವಾಗಿಹಳು || ೩ || ಕಾಮಕ್ರೋಧಗಳೆಂಬ ಗೂಬೆಗಳಿಗಿವಳು | ತಾಮಸದಂತೆ ಕಾಣಿಸುತಿ ರುವಳು || ಸೋಮಗೆ ರಾಹುವಿನಂತಿಹಳು | ಸುಚರ್ಚೆಯೆಂಬ ಸೌ ಮ್ಯಗುಣವೆಂಬ ನೈದಿಲೆಗೆ ಮಾರ್ತಾಂಡಳಿವಳು ||೪|| ಈ ರಮೆಯಿದ್ದ ನರನು ಪಿಶಾಲಾಕ್ಷನಾದರೂ | ದಾರಿನಡೆಯುವಾಗ ಭೃತ್ಯರ ಕೇಳು ವನು || ಶೂರನಾದಾಗ್ಯೂ ಮನವ ನಿಗ್ರಹಿಸನು | ಧೀರನಾದಾಗ್ಯೂ ವಿಷಯವಂಜಿಡನು || ೫ || ಬುದ್ಧಿ ಪ್ರೌಢನಾದಾಗ್ಯೂ ಬಾಲಕನಂತೆ | ವೃದ್ಧರನು ಪರಿಹಾಸ ಮಾಡುತಿರುವನು || ಮೃದು ಭಾಷೆ ಇದ್ದರೂ ಕಠಿಣವನುಡಿಯುವನು | ಕೃತಜ್ಞನಿದ್ದರು ದ್ರೋಹಿಯಾಗುವನು ||೬|| ವೇದವಿದನಾದಾಗ್ಯೂ ಹಿತವಹಿತಜ್ಞಾನದ | ಸ್ವಾದವಿಲ್ಲದೆ ನೆರೆಭ್ರಷ್ಟ

ನಾಗುವನು || ಸಾಧುವಾಗಿದ್ದರೂ ಶ್ರೀ ರಾಮಾರೂಢರ | ಬೋಧವಾ
ನಂದ ಮರೆತು ಬಿಡುವನು || ೬ ||

## ೧೧ ನೇ ಪದ.

( ದಾಟಿ—ಯಾತಕಿನ ಕೊಂದುಪೇಕ್ಷೆ ಎಂಬಂತೆ. )

ಎಷ್ಟು ಖೇದವು ಈ ಪುತ್ರನಸಲುವಾಗಿ | ಸೃಷ್ಟಿಯೊಳಗಿನ ಜನ
ರಿದನರಿಯರ ಹಹಾ || ಪಲ್ಲ || ಮೊದಲು ಸುತನನು ಬಯುಸುವದು
ಖೇದ | ಸುದತಿಯರ ಗರ್ಭವು ನಿಲ್ಲುವಾಗ ಖೇದ | ಆದು ಗರ್ಭವು
ಪುಸಿಸತ್ತೆಂಬ ಖೇದ | ಅದಾದನಂತರ ಪುತ್ರ ಪುತ್ರೆಂಬ ಖೇದ || ೧
|| ಗರ್ಭಪತನ ವಾಗುತ್ತದೇನೆಂಬ ಖೇದ | ಗರ್ಭಕೆ ನವಮಾಸ
ಪೂರ್ಣವಾದಬಳಿಕ || ಆರ್ಭಟಿಸಿ ಬಾಹ್ಯೋಳು ಬರುವಾಗೆಷ್ಟು ಖೇದ|
ಗರ್ಭದಿಂ ಜನಿಸಬೇಕಾದರಿಷ್ಟು ಖೇದ || ೨ || ಜನಿಸಿದನಂತರ ಸ್ತನ
ಪಾನವನ್ನು | ಬಿನದಿ ಪಿಡಿಯದಿದ್ದರದತಿ ಖೇದ | ಜನಿಸುವಾಗ ಜಂ
ತುಗಳು ಸಾಯುವರೆಂಬ ಸುದ್ದಿ | ಯನುಕೇಳಿ ನಿವಾಳಿಯು ಮಾಡುವ
ದು ಖೇದ || ೩ || ಪುತ್ರನ ರೋಗವನು ನೋಡಲಾರದೆ ಮತ್ತೆ | ಉ
ತ್ತಮನಾದರು ಸಹ ಮ್ಲೇಂಛಮಾದಿಗರ || ಹತ್ತರಪೋಗಿ ಕರವನು
ಜೋಡಿಸಿ ಬೇಗ | ಉತ್ತಮನೆಂದು ಯಂತ್ರ ಮಾಡಿಸುವ ಖೇದ || ೪
|| ಕುಲ ಪರಂಪರೆಯಾಗಿ ಬಂದ ಈಶ್ವರನ | ಸಲಲಿತಾರ್ಚನೆಯ
ಮಾಡುವದು ತ್ಯಜಿಸಿ || ಮೈಲಿಯು ಏಳಹತ್ತಲು ತವಕದಿಂ | ಕ್ಷುಲ್ಲ
ದೇವರಿಗೆ ಯಾಚಿಸುವ ಖೇದ ||೫|| ಬಾಲಕನಿರುವಾಗ ಸಾಲೆಗ್ಹಾಕು
ವ ಖೇದ | ಕಾಲಕಾಲಕವನಿಗೆ ಬುದ್ಧಿಗಲಿಸುವ ಖೇದ || ಮೇಲಾಗ
ದಿದ್ದರೆ ವಿದ್ಯಯಲಿ ಖೇದ | ಮೇಲೆ ಯವ್ವನವು ಬರಲು ಗುಣಖೇದ
|| ೬ || ಇಷ್ಟಾಗುವದರೊಳಗೆ ಮರಣ ವಾದರಂತು | ಕಷ್ಟವನು ಪೇ
ಳಲು ವಾಣಿಯೆ ಇಲ್ಲವು || ಎಷ್ಟುಬಗೆ ನೋಡಿದರು ಪುತ್ರನೊಳು
ಖವಿಲ್ಲ | ಶಿಷ್ಟ ರಾಮಾರೂಢನ ಸುಖವೆಸುಖವು || ೭ ||

## ೧೨ ನೇ ಪದ.

( ದಾಟಿ—ಕನ್ನಕಾಸರಿದೊಡೆ ಮುಕ್ತ ಎಂಬಂತೆ. )

ಸ್ವಚ್ಛವಲ್ಲದ ತನುವನಿದನು | ಮನುಜ | ಮೆಚ್ಚುವದು ಸಮಂಜಸವೆ ನೀನು || ಪಲ್ಲ || ಮಲಮೂತ್ರ ರೇತೊ ರಕ್ತವು | ಜ್ಜಮಾಂ | ಸಲುವು ನರೆಗಳಿಂ ತುಂಬಿರುವಂಥ || ಮೊಲೆಯು ಹಾಲೆಂಬ ತಿಳಿಯಾದ | ಕೀವನು | ನಲಿದು ಪಾನಮಾಡಿ ಬೆಳೆದಿರುವಂಥ || ೧ || ಒಂಭತ್ತು ದ್ವಾರವನುಳ್ಳಂಥ | ತನವು | ನಂಬಿದವರಿಗಿದು ಸರೆಳರೂಪವಾಗಿ || ಎಂಭತ್ತು ನಾಲ್ಕುಲಕ್ಷ ಯೋನಿಗೆ | ಕಳುಹಿ | ಕುಂಭಿನಿಯೊಳು ಗತಿಗಾಣಿಸದಂಥ || ೨ || ರೋಗದಾಗರವೆನಿಸಿದಂಥ | ದುಃಖದ | ಸಾಗರವೆನಿಸಿ ಶೋಭಿಸುವಂಥ || ರಾಗಕ್ಕೆ ಕಾರಣವೆನಿಸಿ | ದಂಥ | ಬೇಗದಿ ಮೋಹಕೆ ಕೆಡಹುವಂಥ || ೩ || ಒಂದುಹನಿ ಬಿಂದುವಿನಿಂದ | ಉದಿಸಿ | ಇಂದ್ರಜಾಲದಂತೆ ಕಾಣಿಸುವಂಥ || ಅಂದವಾದ ವಸ್ತ್ರಗಳನು | ಹೊದ್ದರೆ ಕಂದಿಸಿ ದುರ್ಗಂಧವನು ಮಾಡುವಂಥ || ೪ || ಪರಮಪಂಚಾಮೃತ ಭೋಜ | ನವನು | ಕರಗಿಸಿ ನರಕವಮಾಡಿ ಬಿಡುವಂಥ || ಪರಮಾರೂಢನಾಗಿ ಮೆರೆವ | ಶ್ರೀಸ | ದ್ಗುರು ರಾಮನಿಗೆ ಪುಸಿಯಾದಂಥ || ೫ ||

## ೧೩ ನೇ ಪದ.

( ದಾಟಿ—ನೋಡಲಾಗದೆ ದೇವ ಎಂಬಂತೆ. )

ಹೇಸಬಾರದೆ | ಮನುಜ | ಹೇಸಬಾರದೆ || ಮೋಸಗೊಳಿಸಿ ಘಾಸಿಮಾಳ್ಪ | ಹೇಸಿಸ್ತ್ರೀಯು ಇದಕೆ ನೀನು || ಪ || ಕಲುಷವೆಂಬ ತೆರೆಗಳಿಗೆ | ಜಲನಿಧಿಯಾಗಿರುವಂಥ || ಮಲಮೂತ್ರದಿಂದ ಬೆರೆದ | ಲಲನೆಯನ್ನು ನೋಡಿ ನೀನು || ೧ || ಸಾರತರದ ಸುಖದ ಲಯಕೆ | ಕಾರಣೆ ಭೂತಳಾದಂಥ || ವಾರಿಗಣ್ಣಿಲೆ ನೋಡಿ ಹರಣ | ಹೀರಿಕೊಳ್ಳ ನೀಚಸ್ತ್ರೀಗೆ || ೨ || ಕಷ್ಟಗಳೆಂಬಿಲಿಗಳಿಗೆ | ಶಿಷ್ಟಹೋರು ಆಗಿ ಇರ್ಪ | ದುಷ್ಟಹೆಂಣು ಇದಕೆ ನೀನು | ನಿಷ್ಟುರದಿಂ ಭ್ರಷ್ಟೆಯೆಂದು || ೩ || ಪಂಡಿತರುಕ್ತಿ ನಾಶಕಿದು | ಗಂಡನೆಂದು ಮೆರೆದು

ಮತ್ತೆ || ದಂಡಧರಗೆ ಪಿಡಿದು ಕೊಡುವ | ಭಂಡಹೆಂಣಿದಕ್ಕೆ ನೀನು || ೪ || ಉರುತರ ಕರುಣಿಯೆಂದೆನಿಪ | ಪರಮಾರೂಢ ರಾಮನಸುಖ || ದೊರಕಿಸಬೇಕೆಂಬ ಸುಂರಿ | ಗುರುಳಿಸುವ ಸ್ತ್ರೀಯು ಇದಕೆ ||೫||

## ೧೪ ನೇ ಪದ.

( ದಾಟಿ—ಕೇಳಿದಾಗಲಿ ಹೇಳಬಾರದು ಎಂಬಂತೆ. )

ಎಷ್ಟು ಮೋಹವು ನಿನಗೆ ಮನುಜ | ದುಷ್ಟ ಸ್ತ್ರೀಮೇಲೆ || ಪ || ಎಷ್ಟು ಕಷ್ಟಪಡಿಸಿದರೆ ಮತ್ತೆ | ದುಷ್ಟತನದಲಿ ಮೋಹಿಸಿ ನೀನು | ಭ್ರಷ್ಟನಾಗುವಿ ಸೃಷ್ಟಿಯೊಳಗೆ | ಸ್ಪಷ್ಟಪೇಳುವೆ ನಾನು ನಿನಗೆ | ಅನುಪಲ್ಲ | ಸತಿಯು ನನ್ನವಳೆಂದು ನೀ ಮೆಚ್ಚಿ | ಸತತ ಮನದೊಳು | ಹಿತದಿ ಅವಳೊಡನೆ ಪ್ರೇಮಕಚ್ಚಿ || ಹಿತವಹಿತ ವಿಚಾರಮಾಡದೆ | ಶೃತಿ-ಶಾಸ್ತ್ರವ ನೆರೆತಿಳಿಯದೆ | ಪತಿತನಾಗುವಿ ನರಕದೊಳಗೆ | ಚತುರತನದಲಿ ಮೆಚ್ಚಿ ಅವಳಿಗೆ || ೧ || ನೆಟ್ಟಗಿದ್ದರೆ ಪ್ರೀತಿಮಾಡುವಳು | ಬಹುಸೊಗಸಿನಿಂದ | ತಟ್ಟನೆಭೋಗಕ್ಕೆ ಕರೆಯುವಳು || ಹೊಟ್ಟೆಗನ್ನವ ಕಡಿಮೆ ಮಾಡಿದರೆ | ಸಿಟ್ಟಿನಿಂದ ನೋಡಿ ನಿನ್ನನು ನೆರೆ | ಬಿಟ್ಟುಬಿಡುವಳು ಪಂಟಿಹಚ್ಚಿ | ತಟ್ಟನೆ ಮಾರಿಗೆ ಮಸಿಯುಹಚ್ಚಿ || ೨ || ಕುಷ್ಟರೋಗವು ಬಂದು ತೊಡಕಲು | ಉರಿವ ಕಾಷ್ಟದಿ | ಭ್ರಷ್ಟನೆಂದುರೆ ತಾಡಿಸುವಳು ||ಇಷ್ಟಾದರು ನೀ ಮಮತೆಬಿಡದೆ | ನಿಷ್ಟುರದಿ ಅವಳಿಗೆ ಬೆರದೆ | ಕಷ್ಟಪೊಂದುವಿ ದುಷ್ಟಮನುಜನೆ | ಶಿಷ್ಟರಾಮಾರೂಢರ ಮರೆದು || ೩ ||

## ೧೫ ನೇ ಪದ.

( ದಾಟಿ—ನಂಬಬೇಡವೊ ಮನುಜ ಎಂಬಂತೆ. )

ಬಿಡಲು ಆಗದೆ | ನರನೆ | ಬಿಡಲು ಆಗದೆ | ಪೊಡವಿಯಲ್ಲಿ ಶ್ರೇಷ್ಟಗುಣವ ಬಿಡಿಸಿ ಬಾಧೆಗೊಳಿಪ ಕಾಮನ || ಪಲ್ಲ || ಗುರುಹಿರಿಯರ ಪ್ರೇಮವನ್ನು | ಪರತರ ಸನ್ಮಾನವನ್ನು | ಸುರರ ನರರ ವಂದನೆಯನು | ಉರುಳಿಸುವ ಮನಸಿಜನನ್ನು || ೧ || ಶರಣಜನರ ಭಕ್ತಿಯನ್ನು |

ಪರಮವಿವಯ ಗುಣಗಳನ್ನು || ಧರಣಿಯೊಳಗಿನಾರ್ಚನೆಯುನು | ಹರಿಸಿ ದುಃಖಕೊಡುವ ಕಾಮನ || ೨ || ಅಣಿಮಾದಿ ಸುಸಿದ್ಧಿಗಳನು ಪುಣ್ಯ-ಪಾಪ ಚರ್ಚೆಯನ್ನು || ಗಣಚಯದಿಂ ಸ್ತುತಿಗೊಳ್ಳುವ | ಪ್ರಣವ ಧ್ಯಾನನಶಿಪ ರಿಪುವ || ೩ || ಸಾಧನ ಚತುಷ್ಟಿಗಳನು | ವ್ಯಾಧಿಯಳಿವ ಯೋಗವನ್ನು || ಬೋಧರೂಪಾನಂದವನ್ನು ಬಾಧಿಸುವ ರತಿಪತಿಯನ್ನು||೪|| ಪರಮಾರೂಢ ಶ್ರೀರಾಮನ| ಪರಮ ಸುಖವ ಪಡೆಯುವದನು | ಜರಿಸಿ ಕಷ್ಟಕೀಡು ಮಾಳ್ಪ | ಧರಣಿಯೊಳಗೆ ಕಾಮನನ್ನು || ೫ ||

೧೬ ನೇ ಪದ.

( ದಾಟಿ—ಮಾಡಲುಚಿತವೆ ಮನುಜ ಎಂಬಂತೆ. )

ಬೆರೆಯಬೇಡವೊ | ಮನುಜ | ಬೆರೆಯಬೇಡವೊ || ಪರಮ ಸುರರ ಮರುಳಮಾಡಿ | ಶಿರವಕೊರೆದ ಹೆಣ್ಣನಿದನು || ಪಲ್ಲ || ಐದು ಮುಖವನುಳ್ಳ ಬ್ರಮ್ಹ | ನೈದೆಶಿರವ ಕತ್ತರಿಸಿಹುದು||ಸದಮಳ ಪ್ರಕಾಶವನುಳ್ಳ | ಸುಧಾಕರನ ಕುಂದಿಸಿಹುದು || ೧ || ಪರಮಹರುಷದಿಂದ ಮೆರೆವ | ಸುರರ ಪತಿಯು ದೇಹದಲ್ಲಿ || ತ್ವರದಿ ಯೋನಿರೂಪ ವೆಸಗಿ | ಸರಸದಿಂದ ಘಾಸಿಸಿಹುದು || ೨ || ಪರಮ ಐಶ್ವರ್ಯದಿಂದಲಿ | ಮೆರೆಯುವಂಥ ರಾವಣನ | ಹರಣವನ್ನೆ ತ್ಯಾಗಮಾಡಿ | ಸಿರುವ ದುಷ್ಟ ಹೆಂಣನಿದನು || ೩ || ಇಷ್ಟುಪರಿಯಿಂ ಶ್ರೇಷ್ಟರನ್ನು ಭ್ರಷ್ಟಮಾಡಿ ಕೊಂದಿಹುದಿದು || ಕಷ್ಟಕೆ ಗುರಿಮಾಡುವಂಥ | ದುಷ್ಟಹೆಂಣನಿದನು ನೀನು || ೪ || ನಿಮುಷವೇಳೆ ಬೆರೆದರಿದನು | ಅಮಲಾರೂಢ ರಾಮನ ಚರಣ || ಕಮಲಗಳಿಗೆ ದೂರಮಾಡಿ | ತಿಮಿರದಲ್ಲಿ ಕೆಡಹುವದಿದು || ೫ ||

೧೭ ನೇ ಪದ.

( ದಾಟಿ—ಶ್ರೀಗುರುವರೇಣ್ಯನ ಕೃಪಾಕಟಾಕ್ಷ ಪಡೆ ಎಂಬಂತೆ. )

ಬಾಲ್ಯವಸ್ಥೆಯು ಸುಖವೆಂದು ನರರು | ಪೇಳುವದು ಎಂತು ಸುಖವಕಾಣುವದು || ಪ || ಗುಹೆಯುಂ ಗೂಬೆಗಳಾಶ್ರಯಿಸಿರುವಂತೆ

| ಬಹು ವ್ಯಾಧಿಗಳಿದನಾಶ್ರಯಿಸಿರುವವು || ಬಹಳಜನರೆತ್ತಿ ಮುದ್ದಾಡಿಸಲೆಂದು | ಸಹಜವಾಗಿ ಬಾಹುಗಳನೆತ್ತುವದು ||೧|| ಮಲಮೂತ್ರಗಳಲಿ ಕೈಯನ್ನಿಡುತ್ತಲೂ | ಹೊಲಸು ಪದಾರ್ಥವನು ಬಾಯಲ್ಲಿಡುತ್ತಲೂ || ತಿಲಮಾತ್ರ ಶಕ್ತಿಯಿಲ್ಲದೆ ಮಲಗಿದಲ್ಲೆ | ಮಲಗಿಕೊಂಡಳುತ್ತಲಿಲ್ಲದ್ದು ಬೇಡುವದು || ೨ || ತಿರ್ಯಕ್ ಪ್ರಾಣಿಯಂತೆ ನೆಲದಮೇಲೊಡಾಡುತ | ಕರದವರ ಹತ್ತರೋಡಿ ಹೋಗುತ || ಹಿರಿಯರೇನು ಬೇಕೆಂದು ಕೇಳುತಿರಲು | ಹರುಷದಿಂದಲ್ಪ ಪದಾರ್ಥ ಬೇಡುವದು || ೩ || ಸ್ವಲ್ಪದರಿಂದಲೆ ದುಃಖವಪೊಂದುತ | ಸ್ವಲ್ಪದರಿಂದಲೆ ಹರುಷವ ಪಡೆಯುತ || ಎಲ್ಲರಿಗಣಕಿಸುವದು ವಿಧೂಷಿಕನಂತೆ | ಬಲ್ಲಿದ ಜನಕೆ ಕ್ರೀಡಾ ಮೃಗವಾಗಿಹುದು || ೪ || ಕಪ್ಪೆಯಂತೆ ಕುಣಿದು ಕೆಸರಲ್ಲಾಡುವದು | ಉಪ್ಪು ಕಾರರಿಯದೆ ಎಲ್ಲನು ಭಕ್ಷಿಪುದು || ಸುಪಥ ಶ್ರೀರಾಮನ ಭಜಿಸೆಂದರಿದು | ಸುಪಥವೆಂದರೇನೆಂದು ಕೇಳುವದು || ೫ ||

## ೧೮ ನೇ ಪದ.

( ದಾಟಿ—ಆರೇನುಮಾಡುವರು ಆರಿಂದಲೇನಹುದು ಎಂಬಂತೆ. )

ಎಷ್ಟು ಘಾತಕವು ಈ ಯೌವ್ವನವಸ್ಥೆಯು | ನಿಷ್ಟುರದಿಂದೀ ನರರತಿಂದು ತೇಗುವದು || ಪಲ್ಲ || ಯೌವ್ವನಮದದಿಂ ದರಿದ್ರನೆ ಧನಿಕನಂ | ತವಿವೇಕದಿಂದಾರನು ಲಕ್ಷೀಕರಿಸದೆ | ತವೆಸರ್ವಕಾರ್ಯದಲಿ ಶೂರನೆಂದುರಿಯಲು | ವಿವರಿಸುವದೇನು ಶ್ರೀಮಂತನ ಗತಿಯು || ೧ || ಯೌವ್ವನ ಮದದಿಂ ಬುದ್ಧಿಯ ನಾಶಮಾಡಿಕೊಂಡವರಿಗೆ | ಮನ್ಮಥನೆ ಪರಬ್ರಹ್ಮವಾಗಿಯು || ತವೆ ಅಂಗನೆಯರು ಪಾಶ್ಯ ದೇವತೆಗಳಾಗಿ | ಅವರವಾಣಿಯೆ ವೇದವಾಕ್ಯ ವಾಗುವದು || ೨ || ಶೃಂಗಾರ ಪ್ರಬಂಧಗಳುಪನಿಷತ್ತಾಗಿ | ಅಂಗನಾ ಸಂಭೋಗವೆ ರಾಜಯೋಗವಾಗಿ || ಮಂಗ ನಟವಿಟ ಗಾಯಕ ವಿಧೂಷಕರೆ | ಪುಂಗ ವಿದ್ವಾಂಸರಾಗಿ ತೋರುವರು || ೩ || ಸ್ಮಶಾನದಲ್ಲಿ ಪಿಶಾಚಿಗಳು ಸೇರುವಂ

ತೆ | ಕುಸಂಗ ಕುಹಕಬುದ್ಧಿ ದುರ್ವ್ಯವಹಾರದು || ವ್ಯಸನ ದುರಾ ಹಾರ ದುರ್ಗುಣಗಳೆಲ್ಲವು | ಸಸಿನವಾಗಿ ಈ ಅವಸ್ಥೆ ಸೇರುವವು ||೪ || ಗುರುಹಿರಿಯರ ವಾಣಿಯನಾಲಿಸಗೊಡದೆ | ಪರಮಾರೂಢರಾಮನ ಸುಖಕೇಳಗೊಡದೆ || ಪರಮ ಪುರುಷರನು ಸಹ ಪಾತಕದೊಳು | ಬೆರಸಿ ಬಲುಘಾಸಿ ಮಾಡುವದಿದುವೆ || ೫ ||

೧೯ ನೇ ಪದ.

( ದಾಟಿ—ಅಜ್ಞಾನಿಯಲ್ಲವೆ ಜೀವನೆ ನೀನು ಎಂಬಂತೆ. )

ಎಷ್ಟುವರ್ಣಿಸಲಿ ಈ ವೃದ್ಧಾವಸ್ಥೆಯು | ಕಷ್ಟವನು ನೋಡಲು ವಿಚಿತ್ರವಾಗುವದು || ಪಲ್ಲ|| ಜರೆಯೆಂಬತೆರೆಗಳಿಗೆ ಸಾಗರ ರೂಪಾಗಿ | ಹರುಷವೆಂದೆಂಬ ತಾವರೆಗೆ ನಿಶೆಯಾಗಿ || ಅರೆ ಮರುಳೆಂಬ ನೈದಲೆ ಪುಷ್ಪಗಳಿಗೆ| ಸರಸಕೌಮುದಿಯಾಗಿ ಥೊಳೆಯುತಿರುವದು || ೧ || ಶಿರದವಂ ನಡಿಗಿಸುತ ಕರವಂ ಕುಣಿಸುತ |ಕರದಲಿ ದಂಡಂ ಪಿಡಿಸುತಲು ಮತ್ತೆ || ಕರವಂ ಪಣಿಯುಮೇಲಿಟ್ಟು ನೋಡಿಸುತ | ತರುಣರಿಂದ ನಗಿಸಿ ಮಾನ ಕಳೆಯುವದು || ೨ || ಗೂಗೆಯಂತಿದು ಮೂಲೆಯಲಿ ಕೂಡ್ರಿಸುವದು | ಭೋಗಗಳೆಲ್ಲವಿಲ್ಲದಂತಾಗಿ ಜವದಿ | ಆಗಮನಿಗಮವಂ ಗುರುಮುಖದಿಂದರಿಯದೆ| ಪೋಗಿ ಮೂರ್ಖಾದೆನೆಂಬ ಚಿಂತೆಪುಟ್ಟುವದು || ೩ || ಇನ್ನುಮೇಲಾದರು ಜ್ಞಾನತಿಳಿಯಬೇಕೆಂಬ | ಉನ್ನತವಾದ ಕಾಂಕ್ಷೆ ಪುಟ್ಟಲು ತವಕದಿ || ವಿನುತಬೋಧಕೇಳಲು ಶ್ರೋತ್ರವಿಲ್ಲಾಗಿ | ಮನಸಿಗೆ ಬಹುಚಿಂತೆ ಆಗುವದು ಆಗ || ೪ || ಇಂದಿನವರೆಗೂ ನಾ ಪುಣ್ಯವನು ಮಾಡದೆ | ಪೊಂದಿ ಅಧಮ ಮನಸಂ ಕೆಟ್ಟೆನಕಟಾ || ಎಂದುಬಹು ಚಿಂತೆಯಲಿ ಶ್ರೀರಾಮಾರೂಢರ | ಚಂದವಾಗಿ ನೆನೆದು ಮುಕ್ತಿವಡೆಮರುಳೆ || ೫ ||

೨೦ ನೇ ಪದ.

( ದಾಟಿ—ಲಿಂಗಪೂಜೆಯ ಮಾಡಿರೋ ಎಂಬಂತೆ. )

ಏನಂತ ನಂಬುವಿರೊ | ಮಾನವರೇ ನೀ | ವೇನಂತ ನಂಬುವಿರೊ | ಧಾನ್ಯ-ಧನ-ವಸ್ತ್ರ ಭೂಮಿ ಗ್ರಹಗಳನು | ಮಾನಿನಿ ಪುತ್ರಾ

ದಿ ಸಕಲ ವಿಷಯುಗಳನು ‖ ಪ ‖ ಸತ್ತೆಂದುನಂಬುವಿರಾ | ಮತ್ತಿವನ | ಸತ್ತೆಂದುನಂಬುವಿರಾ ‖ ಸತ್ತೆಂದರಿವು ಕನಸಿನಂತೆ ಕಾಣುವವ | ಸತ್ತೆಂದರಿವನು ನಂಬುವದೆಂತು ಪೇಳಿರೊ ‖ ೧ ‖ ಚಿಂತ್ತೆಂದು ನಂಬುವಿರಾ | ಮತ್ತಿವನ | ಚಿಂತ್ತೆಂದು ನಂಬುವಿರಾ ‖ ಚಿತ್ತೆಂದರಿವು ತಮ್ಮ ಗುರ್ತುರ್ಜ ತಾವರಿಯವ | ಚಿತ್ತೆಂದರಿವನು ನಂಬುವದೆಂತು ಪೇಳಿರೊ ‖ ೨ ‖ ಸಾನಂದವೆಂದು ನಂಬುವಿರಾ | ಮೇಣಿವನು | ಸಾನಂದವೆಂದು ನಂಬುವಿರಾ ‖ ಸಾನಂದ ವೆಂದರಿವು ದುಃಖವ ಕೊಡುತಿಹವು | ಸಾನಂದವೆಂದರಿವನು ನಂಬುವದೆಂತು ‖ ೩ ‖ ನಿತ್ತ್ಯೆಂದು ನಂಬುವಿರಾ | ಮತ್ತಿವಸ | ನಿತ್ತ್ಯೆಂದು ನಂಬುವಿರಾ ‖ ನಿತ್ತ್ಯೆಂದರಿವು ನೀರಗುರುಳಿಯಂತಡಗುವವ | ನಿತ್ತ್ಯನೆಂದರಿವನೆಂತು ನಂಬುವದು ಪೇಳಿರೊ ‖ ೪ ‖ ಪೂರ್ಣೆಂದು ನಂಬುವಿರಾ | ಮತ್ತಿವನ | ಪೂರ್ಣೆಂದು ನಂಬುವಿರಾ ‖ ಪೂರ್ಣೆಂದರಿವು ರಾಮಾರೂಢಗೆ ಪರಿಚ್ಛಿನ್ನ | ಪೂರ್ಣೆಂದರಿವನೆಂತು ನಂಬುವದು ಪೇಳಿರೊ ‖ ೫ ‖

೨೧ ನೇ ಪದ.

( ದಾಟಿ—ಅಹಾ ಏನುಕೌತುಕವಿದು ಕಾಮನೊಡನಾಟ ಎಂಬಂತೆ. )

ಅಹಾ ಎಂಥ ಮೂರ್ಖರೀಲೋಕದ ಜನರು | ಅಹರ್ನಿಶ ನೀಚ ವಿಷಯ ಬಯಸುವರು ‖ ಪ ‖ ವಿರತಿಯನೆ ತ್ಯಜಿಸಿ ಭೋಗವನೆ ಬೇಡುವರು | ಗುರುಹಿರಿಯರನಳಿದು ಸುತರನಿಚ್ಛಿಪರು ‖ ಸ್ವೈರಣೆಯೆಂಬುವ ಧನವನೆ ಕಳೆದು | ವೈರತ್ವಬೆಳಿಸುವ ಧನವನಿಚ್ಛಿಪರು ‖ ೧ ‖ ರೋಗಕೆ ಮೂಲವಾದ ಜ್ಞಾನ ಭೋಗಿಸದೆ | ರೋಗವನೆನಾಶ ಮಾಡಲೀಕ್ಷಿಪರು ‖ ಭೋಗದ ಎಂದೆಂದು ಸುಖವನು ಜರಿದು | ಆಗಿಪೋಗುವ ವಿಷಯ ಸುಖವ ಬಯಸುವರು ‖ ೨ ‖ ವಾದವನು ಮಾಡದೆ ಆತ್ಮವಿದ್ಯೆಯೊಳು | ವಾದಮಾಡುವರನಾತ್ಮ ವಿದ್ಯೆಯೊಳು ‖ ವಾದರಹಿತವಾದ ಶಾಸ್ತ್ರವನು ನೋಡದೆ | ವಾದಶಾಸ್ತ್ರವ ನೋಡಲಪೇಕ್ಷಿಸುವರು ‖ ೩ ‖ ಹಾದಿಯು ಸಿಗಲಿಲ್ಲ ಹಾಡಿದವನಿಗೆಂದು | ಓದಿದವನಿಗೋಣಿ ಸಿಗಲಿಲ್ಲವೆಂದು ‖ ಓದದೆ ವೇದವನು ಕೇಳದೆ ಬೋಧವನು | ಬಾಧವಾಗುವ ಸಂಸಾರಕೆಳಸವರು ‖ ೪ ‖ ಪರಮ

ಚೈತನ್ನ್ಯಳಿದು ಜಡವನೆ ಪಿಡಿವರು | ಪರಮಾರ್ಥವಳಿದ ಸತ್ಯ ಬಯಸುವರು || ಗುರು ರಾಮಾರೂಢಗೆ ಶರಣೆಂದು ಪೂಜಿಸದೆ | ಧರಿಯ ಕಲ್ಲಿಗೆ ಶರಣೆಂದಾಚರಿಸುವರು || ೫ ||

## ೨೨ ನೇ ಪದ.

( ದಾಟಿ—ಶ್ರೀಗುರು ಶಿವನೆ ಕರುಣದಿಂದಲೆನಗೆ ಎಂಬಂತೆ. )

ನೀಚ ವಿಷಯಗಳನಿಚ್ಛಿಸುವ ಜನರು | ಊಚ ಬೋಧಾಮೃತ ಸುಖಕೆಳಿಸುವರೆ || ಪ || ನರಕತಿಂಬುವ ಸೂಕರ ಸ್ವಾದರಿಯುವದೆ | ಕೆರುವ ಕಡಿಯುವ ಶ್ವಾನ ಕಬ್ಬಬೇಡುವದೆ || ಸುರೆಯನ್ನು ಪಾನಮಾಡುವ ಮಾದಿಗನು | ಪರಮಾಮೃತವನ್ನು ಪಾನಮಾಡುವನೆ || ೧ || ಪೂಯವನು ಹೀರುವ ಮಕ್ಷಿಕವು | ಪೇಯರಹಿತವಾದ ಪುಷ್ಪ ಬಯಸುವದೆ || ವಾಯಸವು ನೀಚ ಫಲಗಳನು ಬಿಟ್ಟು | ಆಯಾಯ ಉತ್ತಮ ಫಲವತಿಂಬುವದೆ || ೨ || ಕೆರೆಯಗೊಜ್ಜನು ಪೀರುವ ಕಪ್ಪೆಯು ಸರಸ ಮಧುವನ ಪಾನಮಾಡುವದೆ || ಇರಳು ಹಗಲು ವಿಷಯ ಸುಖವನಿಚ್ಛಿಸುವವರು | ರಾಮಾರೂಢರ ಬೋಧವ ನಿಚ್ಛಿಪರೆ ||೩||

## ೨೩ ನೇ ಪದ.

( ದಾಟಿ—ಬೋಧಿಸೆನ್ನನು ಗುರುವೆ ಎಂಬಂತೆ. )

ಏನು ಪ್ರಯೋಜನವು | ಜ್ಞಾನದಿಂದ | ಹೀನಲೌಕಿಕರಿಗೆ || ಖೂನವಿಲ್ಲದೆ ಬೊಗಳುವ ಶ್ವಾನನಂತೆ | ಜ್ಞಾನವಂತರ ನೋಡಿ ನಿಂದಿಸುವವರಿಗೆ || ಪ || ಕಂಣುಗಳಿಲ್ಲದಂಥ | ಮನುಜನಿಗೆ | ಕನ್ನಡಿಯಿಂದೇನು ಫಲವು || ಚನ್ನಾಗಿ ತರಗೆಲೆಯಂ ಭಕ್ಷಿಪಮೇಕೆಗೆ | ಸಂಣಶಾವಿಗೆ ತುಪ್ಪದಿಂದೇನು ಫಲವು || ೧ || ಮರದ ಮೇಲೋಡಾಡುವ | ಕೋತಿಗೆ ಸರಸಾ | ಭರಣದಿಂದೇನು ಫಲವು || ನಿರಂತರ ಅಡವಿಯೊಳಗೆ ತಿರುಗಾಡುವ | ನರಿಗೆ ಸುರಲೋಕದಿಂದೇನು ಪ್ರಯೋಜನವು || ೨ || ತುಡುಗತನವ ಮಾಡುವ | ಮನುಜರಿಗೆ | ಸೊಡರಿನಿಂದೇನು ಫಲವು || ಎಡೆಬಿಡದೆ ಪುಸಿವಾಣಿಯ ನುಡಿಯುವಗೆ | ಬೊಡ

ವಿ ಗಧಿಪತಿಯಾಣೆಯಿಂದೇನು ಫಲವು || ೩ || ಮಾಣದ್ಹತ್ತರಿದ್ದರು | ನಪುಂಸಕಗೆ | ರಾಣಿಯಿಂದೇನು ಫಲವು || ಗಾಣದವೃಷಭಕೆ ಶೃಂಗಾರದಿಂದೇನು | ಗೋಣಿಗೆ ಗವಸಣಿಕೆಯಿಂದೇನು ಫಲವು || ೪ || ಪರಮಪಾಪಿ ಮನುಜಗೆ | ಉನ್ನತವಾದ | ವಿರತಿಯಿಂದೇನು ಫಲವು || ತೆರವು ಇಲ್ಲದೆ ವಿಷಯದಲ್ಲಿರ್ಪ ನರರಿಗೆ | ಗುರು ರಾಮಾರೂಢರ ಬೋಧದಿಂದೇನು ಫಲವು || ೫ ||

## ೨೪ ನೇ ಪದ.

( ದಾಟಿ—ಕೇಳಿದಾಗಲೆ ಹೇಳಬಾರದು ಎಂಬಂತೆ )

ಏನು ಹೇಳಲಿ ಲೌಕಿಕರಾಟ | ಅರೆಮರುಳರಾಟ || ಪಲ್ಲ || ಶ್ವಾನನ ಕನಸಿನ ತೆರದಿ | ಕಾಣುವ ಸಂಸಾರದೊಳಗೆ | ಮಾನವಿಲ್ಲದೆ ಉರಿದು ಬಿರಿದು | ಖೂನವಿಲ್ಲದೆ ಪೋಗುವರು || ಅನುಪಲ್ಲ || ಹಗಲು ರಾತ್ರಿ ತಮ್ಮ ವರ್ಣನೆಯು | ಬೆಳಿಸುತ ಇವರು | ಜಗದೊಳೆಲ್ಲರು ಭ್ರಷ್ಟರೆಂಬರು || ಜಗದೊಳು ತಾವು ಶ್ರೇಷ್ಠರಾಗಲೆಂದು | ಮಿಗೆ ಯೋಚಿಸಿ ಪ್ರಾಣದೇವಗೆ | ಬಗೆಬಗೆಯ ನೈವೇದ್ಯ ಮಾಡಿ | ಅಗಣಿತ ಧನವನು ಬೇಡುವರು || ೧ || ತಮಗೆಷ್ಟು ವಿಷಯುಗಳಿರಲು | ಅವನು ಜರಿದು | ಕುಮನದಿಂದಲಿ ಎರಡನೆಯವರ || ರಮಣಿ ದ್ರವ್ಯ ಭೂಮಿ ಮೊದಲಾದ |ಸಮೂಹದಲ್ಲಿ ಮನವನಿಟ್ಟು|ಯಮನಬಾಧೆಯ ಪೊಂದುತಿರುವರು | ಮಮಕಾರದಿಂದಲಿ ಇವರು || ೨ || ಪರಮಹಂಸಾಶ್ರಮಿಯ ಕಂಡರೆ | ಕ್ರೂರತನದಲಿ | ಭರದಿ ಅವರಮುಂದೆ ನುಡಿಯುವರು | ಪರಮ ಮಾಯೆಯು ದಾರುಗೆದ್ದರು | ಪರಮನಿಗೆ ಸಹ ಬಿಟ್ಟಿಲ್ಲವೆಂದು | ತರುಣಿಯಿಲ್ಲದೆ ಮೋಕ್ಷವಿಲ್ಲೆಂದು | ಇರಳು ಹಗಲಳಿಗೆ ಬೆರೆವರು || ೩ || ಪುಷ್ಟಗಾತ್ರೆಂದಿದ್ದರೆ ಸಾಕು | ಬಹುಶ್ರೇಷ್ಟರೆಂದು | ಅಷ್ಟಮದದೊಳು ಬೆರೆದುರಿಯುವರು || ಎಷ್ಟುಖೇದವು ಬರಲು ಮತ್ತೆ | ನಿಷ್ಟುರದಿ ವಿಷಯಕ್ಕೆ ಬೆರೆವರು | ಇಷ್ಟಬೋಧವ ಕೇಳಿದವರು | ಸೃಷ್ಟಿಯೊಳಗೆ ಭ್ರಷ್ಟರೆಂಬರು || ೪ || ದುರುಳರು ಅತಿ

ಕ್ಷುದ್ರಕಪಟರು | ದುರಕೋಪಿಗಳು | ನಿರಂತರ ವಿಷಯಾಭಿಮಾನಿ ಗಳು | ದುರಿತ ವಿಷಯವು ಸತ್ಯವೆಂಬರು | ಗುರುರಾಮನೆಂದರೇನೆಂ ಬರು | ತರುಣಿ ಮಕ್ಕಳೆಂದವಿರಲು ಧರಣಿಯೊಳು ನಾವು ಶ್ರೇಷ್ಠರೆಂ ಬರು || ೫ ||

## ೨೫ ನೇ ಪದ.

( ದಾಟಿ—ಶಂಭೊ ಮಾಮೇವಪಾಲಯ ಎಂಬಂತೆ. )

ಏನು ಹೇಳುವದೇನು ಕೇಳುವದು | ಈ ಲೋಕದವರಿಗೆ || ಪ || ಜ್ಞಾನವಂತರ ಕಂಡರಿವರು | ಮಾನವಿಲ್ಲದ ವಿಟನತೆರದಿ | ಜ್ಞಾನದಿಂದಲೆಮಗೆ ಪ್ರಯೋಜನ | ಹಾನಿಯಲ್ಲದೇ ನಿಲ್ಲವೆಂಬರಿ | ಗೇನು || ಅನುಪಲ್ಲ || ಆರುರುಚಿಗಳ ಸುಖವ ಸವಿಯುತ | ಬೇಗದಿಂದಲಿ | ಆರುವರ್ಗಾದಿ ಬೆರೆದು ಮೆರೆಯುತ || ವಾರಿಜಾಕ್ಷಿಯರನು ಕಂಡರೆ | ಮಾರನಾಟಕೀಕ್ಷಿಸುತ್ತ | ಸಾರತರದ ಸುಖವಜರಿಯುತ | ಭೂರಿಪಾಪಕೆಳಸುವವರಿಗೆ || ೧ || ಸತತಮಾನಿನಿ ತನಯಸಂಸಾರ | ದ್ವರ್ಣನೆಯ ಮಾಡುತ ಶೃತಿಯೊಳಿಲ್ಲದ ಮತವ ಪಿಡಿಯುತ | ಸತತ ಕುಲ ಛಲವಪಿಡುದು | ಮತಿವಂತರನ್ನೋರಂತೆ ಹಳಿಯುತ | ಹಿತವಹಿತ ವಿಚಾರ್ಯರವಿಲ್ಲದೆ | ಸತತ ಭವದೊಳು ಮುಳುಗುವವರಿಗೆ || ೨ || ಪಾಯಸವನು ಕೊಡಲು ತಿನ್ನದ | ನಾಯಿಕುನ್ನಿಯಂತೆ | ಪೇಯವಾದ ವಿಷಯ ಬಯಸುತ || ಮಾಯಮೋಹವ ತ್ವರದಿ ಕೂಡುತ ಶ್ರೇಯರಾವಮಾರೂಢರ ಜರಿಯುತ | ಕಾಯದಮೇಲಭಿಮಾನ ಮಾಡುತ | ಜಾಯಗುಣಗಳನಳಿಯುವವರಿಗೆ || ೩ ||

## ೨೬ ನೇ ಪದ.

( ದಾಟಿ—ನಂಬಬೇಡವೋ ಮನುಜ ಎಂಬಂತೆ. )

ಘಾಸಿಯಾದೇ ನೀ ಮನುಜ | ಘಾಸಿಯಾದೆನೀ | ಮೋಸರೂಪ ವಿಷಯಗಳಿಗೆ | ಆಶೆಪಟ್ಟು ಹರುಷದಿಂದ || ಪಲ್ಲ || ಸ್ವಾತಿಮಳೆಗೆ ಜಪ್ಪಿಸುವ | ಚಾತಕಪಕ್ಷಿಯಂತೆ ನೀ || ಘಾತಕ ಸ್ತ್ರೀಯರಿಗೆ ಜಪಿಸಿ

| ಪಾತಕದೊಳ್ಮುಳುಗಿ ಬೇಗ || ೧ || ಅಷ್ಟಮದದಿ ಮೆರೆದು ನೀನು | ಅಷ್ಟಪಾಶದಿ ಕೊರೆದು ನೀ || ಅಷ್ಟವಿಧದೀಶಾರ್ಚನೆಯು | ನಿಷ್ಠುರದಿಂ ತ್ಯಜಿಸಿ ನೀನು || ೨ || ಸಪ್ತವೆಸನದಿಂದ ನೊಂದು | ಸಪ್ತಧಾತುಗಳಿಂ ಬೆಂದು || ಸಪ್ತಭೂಮಿಕೆಗಳ ಮರೆದು | ಸುಪ್ತಿ ಸಾಕ್ಷಿ ಅರುವ ಕಳೆದು || ೩ || ಪಂಚವಿಷಯದಿಂದನೊಂದು | ಪಂಚೇಂದ್ರಿಯದಿಂದ ಬೆಂದು || ಪಂಚವಿಂಶತಿ ತತ್ವಗಳನು | ಹಂಚಿಕೆಯಿಂಬೇರ್ಪಡಿಸದೆ || ೪ || ಮೂರು ಕರ್ಮವ ಮಾಡಿನಿ | ಮೂರೀಷಣದೊಳ್ಕಂದಿನಿ || ಮೂರವಸ್ಥೆ ಮರ್ಮವನ್ನು ಬೇರೆ ಬೇರೆ ವಿವೇಕಿಸದೆ || ೫ || ಆರುವರ್ಗದಿಂದ ಮೆರೆದು | ಆರು ಭ್ರಮುಗಳನ್ನು ದಳೆದು || ಆರುಧರ್ಮವ ಜರಿದು ನೀ | ಆರೂರ್ಮಿಗಳಲ್ಲಿ ನೊಂದು || ೬ || ಆಶ ಪಾಶವನ್ನು ಮೀರಿ | ದೀಶಾರೂಢರಾಮನ ಪಾದ | ಶಾಶ್ವತದಿಂ ಪಿಡಿದು ನೀನು | ನಾಶರಹಿತ ಸುಖ ಸವಿಯದೆ || ೭ ||

## ೨೭ ನೇ ಪದ.

( ದಾಟ—ಭಜನೆಯನು ಮಾಡಿರೋ ಎಂಬಂತೆ. )

ಮುಳುಗಿ ಪೋಗುವಿಯಲ್ಲೊ | ಮನುಜನಿ | ಮಳಲರೂಪ ಭವದೊಳು || ಇಳೆಯೊಳು ಪುಟ್ಟಿ ಶ್ರೇಷ್ಠಜ್ಞಾನವ ತಿಳಿಯದೆ | ಸುಳಿಗಾಳಿ ಪ್ರಪಂಚಕೆ ಮನಗೊಟ್ಟು ಭರದಿ || ಪ || ನೀತಿ ಗುಣಗಳನಳಿದು | ತ್ವರೆಮಾಡಿ | ಜಾತಿಗೋತ್ರವ ಪಿಡಿದು || ಪೂತಗಾತ್ರವನುಳ್ಳ ಈಶನಾರ್ಚನೆ ಕಳೆದು || ಪಾತಕಪಂಚವನು ಬೇಗದಿ ದಳೆದು || ೧ || ನರಕದೇಹವನು ಮೆಚ್ಚಿ | ಭರದಿಂದ | ಅರಿಗಳಾರನು ಕಚ್ಚಿ || ಪರರ ದ್ರವ್ಯದ ಮೇಲೆ ವಂಚನೆಯನು ಮಾಡಿ | ಪರಮ ಘಾತಕರ ಸಂಗವ ನೆರೆಕೂಡಿ || ೨ || ಕಾಲನಭಯವ ಮರೆದು | ಶೀಘ್ರದಿಂ | ದೇಳು ವ್ಯಸನದಿ ಕೊಳೆದು || ನೀಲಲೋಚನವುಳ್ಳ ಪರಮಾತ್ಮನ ಜರಿದು | ಜಾಲರೂಪವಾದ ಮಮಕಾರದಲಿ ಮೆರೆದು || ೩ || ಪಂಚತಾಪದಲಿ ಬೆಂದು | ಮುಂಚಿತವಾಗಿ | ಪಂಚಲಕ್ಷಣವ ಕೊಂದು || ಸಂಚಿತಾಗಾಮಿ ಕರ್ಮ ನಶಿಸದೆ ಜ್ಞಾನದಿಂ | ಮಿಂಚಿನಂತೆ ತೋ

ಕೂಡಿ || ೪ || ಆತ್ಮನು ನಾನೆನ್ನದೆ | ತ್ವರೆಯಿಂದ | ನಾತ್ಮಭಾವ ಕಳೆಯದೆ || ಸ್ವಾತ್ಮಾನಂದವ ಸುಖವ ಪೂರ್ಣಾನುಭವಿಸದೆ | ಆತ್ಮಾರೂಢರಾಮನ ನಿಜರೂಪ ಕಾಣದೆ || ೫ ||

೨೮ ನೇ ಪದ.

( ದಾಟಿ—ಆಹಾ ಎಂಥ ಮೂರ್ಖರೀಲೋಕದ ಜನರು ಎಂಬಂತೆ. )

ಮಿಥ್ಯಪ್ರಪಂಚಕೆ ಕೆಡುವದುಚಿತವೆ | ತಥ್ಯವೆಂದು ನಂಬಿ ಬರಿದೆ ಮಾನವ || ಪಲ್ಲ || ವಾರಿಯು ಬುದ್ಭುದದಂತೆ ಈ ಗಾತ್ರವು | ಕಾರಮಿಂಚಿನತೆರದಿ ಈ ಸಂಸಾರವು | ಸೋರುವಜಲದಂತೆ ದೇಹದಾಯುಷ್ಯವು | ವಾರಿಜದೆಲೆ ಮೇಲಿನ ಜಲಕಣವು ಧನವು || ೧ || ತಮಿಶ್ರದೊಳು ಮರದಲಿ ನೆರೆದ ಪಕ್ಷಿಯಂತೆ | ರಮಣಿಮೊದಲಾದ ಬಂಧುಬಳಗವು || ವಿಮಲಜಲದ ಸುಳಿಯಂತೀಜಗವು || ಅಮಳ ಸಪ್ತಲೋಕ ಮಳೆಗಾಲದ ಮೇಘ || ೨ || ಮೃಗಜಲದ ಓಲ್ ವಿಷಯದಾನಂದವು | ಅಗಜೇಶ ಹರಿವಿಧಿಗಳು ತರಗೆಲೆಯು || ಸಕಲ ಜೀವಿಗಳೆಲ್ಲ ಸ್ವಪ್ನದ ಜೀವಿಗಳು || ನಿಗಮಗೋಚರನಾದ ರಾಮನೆ ಸತ್ಯ || ೩ ||

೨೯ ನೇ ಪದ.

( ದಾಟಿ—ಮಾಡಲುಚಿತವೆ ಮನುಜ ಎಂಬಂತೆ. )

ಕೂಡೋಮನುಜನೆ ಬೇಗ | ಕೂಡೋಮನುಜನೆ || ನಾರದೊಳಗಿನೆಲ್ಲ ವಿಷಯ ಕೇಡವೆಂದು ಸತ್ಯಪದವ || ಪಲ್ಲ || ಐದುವಿಷಯದ | ಸುಖವು | ಖಡ್ಗದಕೊನೆ ಭಾಗದೊಳಗಿರುವ || ಮಧುಃನೆಕ್ಕಿದಂತೆ ಎಂದು | ಐದೆಅಳಿದು ಸತ್ಯವಿಷಯ || ೧ || ಧನಕನಕಸರ್ವಲ್ಲವನ್ನು | ವನದೊಳಗಿನ ಗ್ರಾವದಂತೆ | ಮನಸುಮುಟ್ಟಿ ಅರಿದುನೀನ | ವಿನುತ ಸತ್ಯಮೋದವನ್ನು || ೨ || ತನಯ ಮಾನಿನಿಯುಲ್ಲರ | ಕಸಿನ ತನಯಾದಿಯೆಂದು || ಮನದೊಳರಿದು ಬಿನದಿನೀನು | ಚಿನಮಯ ಸುಖಸ್ವರೂಪವನು || ೩ || ಲೋಕದೊಳಿಹ ಸಕಲ ಭೋಗ

ರೋಗದಂತೆ ಎಂದುನೀನು||ಯೋಗಿಗಳಸಮೂಹದಿಂದ|ಬೇಗದಿ ವಂದಿತನನ್ನು || ೪ || ಈಶ ವಿಷ್ಣು ಬ್ರಹ್ಮಾದಿಗಳು | ನಾಶರೆಂದು ಬಗೆದು ನೀನು | ನಾಶರಹಿತ ಸುಖವನುಳ್ಳ | ದೇಶಿಕೇಂದ್ರನ ತೀವ್ರದಿಂ ||೫|| ತನುವನೆ ನೀ ಮೊದಲು ಮಾಡಿ | ಮನಸು ಬುದ್ಧಿ ಚಿತ್ತಹಮ್ಮು|| ಇನಿತು ಎಲ್ಲ ಬುದ್ಬುದವೆಂ| ದನಘರೂಪ ಸಾಕ್ಷಿಯನ್ನು || ೬ || ವೇದಸೂಕ್ತಿ ಮೊದಲು ಮಾಡಿ | ವಾದ ಭೇದವ ನೆರೆ ತ್ಯಜಿಸಿ || ಬೋಧಮಯ ರಾಮಾರೂಢರ | ಸಾದರದಿಂದ ನೀಮನುಜ || ೭ ||

೩೦ ನೇ ಪದ.

( ದಾಟಿ—ನಿದ್ರೆಬಾರದಿದೆನ್ನ ಪಂಭವ ದುಃಖಸ, ವೆಂಬಂತೆ )

ಬಲು ಕೇಡು ಬರ್ಪುದು ಗರ್ವ ದ್ವೇಷಾದಿಯಿಂ | ಸಲೆನಾಶಗೊಳಿಸಿವುಗಳನು ಮನುಜ || ಪ || ಯೋಗ ಸಿದ್ಧಿಯ ಪೊಂದಿ ರಾಜಪದವಿಯ ಸುಖವ | ಭೋಗಿಸೇಳು ದ್ವೀಪಕಧಿಪತಿಯೆನಿಸಿದ || ಪುಂಗ ಕಾರ್ತವೀರ್ಯನ ಸಹಸ್ರಬಾಹುಗಳು | ಪೋಗಿಲ್ಲವೆ ರಾಜ ಮದದಲಿ ಭಾರ್ಗವನಿಂ || ೧ || ಗರ್ವದಿಂದಲಿ ದಕ್ಷಬ್ರಮ್ಹನು ವಿಸರ್ಜಿಸಿ | ಶರ್ವನಂ ಯಾಗವಗೈಯ್ಯಲಾ ಸಮಯದೋಳ್ || ಶರ್ವಾಣಿಪತಿಯ ರೌದ್ರವನು ತಡೆಯಲಾರದೆ | ಸರ್ವ ಜನರು ನಾಶಕೊಳಗಾಗಲಿಲ್ಲವೆ || ೨ || ಕ್ರೂರತನದಿಂತಪವು ಹೆಚ್ಚುವದೆಂದರಿತು ದೂರ್ವಾಸಮುನಿಯು ಬಲು ಕ್ರೂರತನದಿಂದ || ಧೀರನಾದಂಬರೀಷಗೆ ದ್ವೇಷಿಸಲು ಶ್ರೀಮ | ನ್ನಾರಾಯಣನ ಚಕ್ರವು ಮರುಳು ಮಾಡಿಲ್ಲವೆ ||೩|| ಮನಸಿಜನು ತನ್ನರೂಪಿನಹಂಕಾರದಿಂ | ಮನೀಷೆ ಹೀನನಾಗಿ ಮು ದಿನದನ್ನರಿಯದೆ || ಅನಘನಾದಗಜೇಶಗೆ ದ್ರೋಹವ ಮಾಡಲು ತನುದಹನವಾಗಿ ಬೂದಿಯಾಗಿಲ್ಲವೆ || ೪ || ವರಯಾಜ್ಞವಲ್ಕ್ಯನ ಕಹೋಳ ಋಷಿಯಲ್ಲಿ | ವರವಿದ್ಯೆವನು ಕಲಿತು ವಾದದಲಿ ಶ್ರೀಗುರು ಮರ್ಯಾದೆಯನು ನಾಶಿಸಲು ರೋಷದಿಂ | ಗುರು ಶಪಿಸೆ ಸರ್ವವಿದ್ಯೆಯಃಕಾರಿಲ್ಲವೆ || ೫ || ಮೇರು ಗಿರಿಯಂ ತುಚ್ಛಿಸಿ ದ್ವೇ ದಿಂ ವಿಂಧ್ಯಾದ್ರಿ | ಸೂರ್ಯನ ಸಂಚಾರಕೆ ಅಡ್ಡಾಗಲತಿ ಬೆಳೆದು

ಶೂರನಾದಗಸ್ತ್ಯಮುನಿಯು ವಿಂಧ್ಯಾದ್ರಿಯಂ | ಧಾರುಣಿಯ ಸಮಾನ ವಾಗಿ ಮಾಡಿಲ್ಲವೆ || ೬ || ತರುಣಿ ಶಕ್ತಿ ಪ್ರಾಯ ರೂಪಿನ ಮದದಿಂ ದ | ಬೆರೆದ ನಳ ಕೂಬರ ಮಣಿಗ್ರೀವರು ಕೂಡಿ | ತರುಣಿಯರೊಡ ನೆ ಜಲದೊಳು ಕ್ರೀಡಿಸುತ್ತಿರಲು | ಮರವಾಗೆಂದು ಶಾಪವಿತ್ತಿಲ್ಲವೆ ನಾರದ || ೭ || ಪಾರಮಾರ್ಥ ಜ್ಞಾನಿಯಾದ ವಸಿಷ್ಟ ಮುನಿ | ಕ್ರೂ ರತನದಿಂ ನಿಮಿಗೆ ಶಾಪವಿತ್ತದರಿಂದ || ಊರ್ವಸಿಯು ಬಸುರಿನಲಿ ಆತನು ಜನ್ಮವ | ಧಾರಣ ಮಾಡಿಲ್ಲವೆ ಕೋಪದ ಫಲದಿಂ || ೮ || ಇಂತಿವರೆಲ್ಲರಿಗೆ ಗರ್ವ ದ್ವೇಷಾದಿಯಿಂ | ಚಿಂತೆ ಬಂದದ್ದನ್ನು ನೋಡಿ ಕೇಳಿ ತಿಳಿದು || ಸಂತತಿಯುನಳಿದು ಗರ್ವದ್ವೇಷಾದಿಗಳ | ಸಂತ ಶ್ರೀಪ್ಕಾರೂಢ ರಾಮನನು ಪೊಂದು || ೯ ||

೩೧ ನೇ ಪದ.

( ದಾಟಿ—ಎಷ್ಟು ಮೋಹವು ಮನುಜನನಗೆ, ಎಂಬಂತೆ. )

ಬರಿದೆ ವೇಳೆಯ ನಳಿವು ದುಚಿತವೆ ಜೀವನೆನಿನಗೆ || ಪ ||

ದುರಿತ ಗುಣಗಳನಾಶಮಾಡದೆ | ರಮುಗುಣಗಳ ಜವದಿ ಕೂ ಡದೆ | ಪರಮಾರ್ಥವಗಳಿಸಿಕೊಳ್ಳದೆ | ವರ ಮನುಷ್ಯ ಜನ್ಮಕೆ ಪುಟ್ಟಿ ||ಅನುಪಲ್ಲ|| ಪರರನಿಂದೆಯನ್ನು ಕಳೆಯದೆ| ತ್ವರೆಯಿಂದ ನೀನು | ಪರಮನ ನಾಮವನುಸ್ಮರಿಸದೆ || ದುರಿತವಾದ ಸಂಸಾ ರದೊಳಗೆ | ದುರಿತದುರ್ಗುಣಂಗಳೊಳಗೆ | ನಿರುತ ಮನವಿಟ್ಟು ತವ ಕದಿ | ವಿರತಿಯನು ನೆರೆ ತ್ಯಜಿಸಿಲೋಕದಿ || ೧ || ಸತಿಸುತರ ನಿತ್ಯ ರೆಂದು | ನೀನರಿಯದೆ ಮನದೊಳು |ಶ್ರುತಿಯೊಳಲ್ಲದ ಪಥವಳಿಯ ದೆ | ಸತತ ಮನದೊಳು ಶಾಂತಿಧರಿಸದೆ | ಮತಿಯ ದುರ್ವಿಕೃತಿಯು ನಳಿಯದೆ | ಉತ್ತಮಾಧಮವಿವರಿಸದೆ | ಸತ್ಯ ಪದಾರ್ಥವನು ಪಿಡ್ಡ ಯದೆ || ೨ || ಕರಣವನುವ ಶಮಾಡಿಕೊಳ್ಳದೆ | ಶಿವಶರಣರೊಳು | ಪರಮ ಹರುಷದಿ ಕೂಡಿಆಡದೆ || ಮರವೆಯನು ನಾಶಮಾಡಿಕೊಂ ಡು | ಅರುವನು ನೆರೆಬಿಡದೆ ಕೂಡಿಕೊಂಡು | ಗುರು ತಿಲಕಾರೂಢ ರಾಮನ | ಪರತರ ಮುಕ್ತಿ ಸುಖವ ಪಡೆಯದೆ || ೩ ||

### ೩೨ ನೇ ಪದ.

( ದಾಟಿ—ಭ್ರಮರಾಂಬಾ ಮಾಂ ಪರಿಪಾಹಿ, ಎಂಬಂತೆ. )

ವಿರಕ್ತನ ಗುಣಗಳನು |ಪೇಳುವೆ |ನರಿಯರಿ ನೀವು ಮನುಜರೆ ಬೇಗ || ಪ || ಸತಿ ಸುತರೆಲ್ಲರು ಮಿಥ್ಯೆ | ವೆಂದು | ಸತತ ಮನದೊಳರಿವನೆ ವಿರಕ್ತ || ಪಿತಮಾತೆಯರು ದುಃಖದಾತ | ರೆಂದು | ಯತಿನುತಭವ ನಾರ್ಚಿಪನೆ ವಿರಕ್ತ || ೧ || ಧನಹೇಮಗಳನೆಲ್ಲ ಕಳೆದು | ಮತ್ತೆ | ಘನ ಶಂಭುವಿನ ಶೇವಿಪನೆ ವಿರಕ್ತ || ಅನಘನಾಗಿ ಸುಖವ ಪಡೆಯ | ಬೇಕೆಂ | ದನುದಿನದೊಳು ಚಿಂತಿಪನೆ ವಿರಕ್ತ || ೨ || ಕಡು ರೂಪವಂತ ಸ್ತ್ರೀಯಳ | ನೋಡಿ | ಅಡಿಗಡಿಗೆ ಹೀಯಾಳಿಸುವನೆ ವಿರಕ್ತ | ಪೊಡವಿಯೊಳಗಿನ ಪ್ರಾಣಿಗಳ | ಮೇಲೆ | ಕಡುಪ್ರೇಮ ಮಾಡುವವನೆ ವಿರಕ್ತ || ೩ || ಸಕಲ ಜೀವರಿಗೆ ಹಿತವ | ಬಯಸಿ | ಸಕಲ ವಿಷಯುಗಳಳಿವನೆ ವಿರಕ್ತ || ಅಕಲಂಕ ವೇದ ಸಮ್ಮತ | ವಾದ | ಭಕುತಿಯ ನಗಲದಿರುವನೆ ವಿರಕ್ತ || ೪ || ಹದಿನಾಲ್ಕು ಲೋಕವನೆ ಮಿಥ್ಯೆ | ವೆಂದು | ಹೃದಯದಲಿ ಧ್ಯಾನಿಪನೆ ವಿರಕ್ತ || ವಿಧಿ ಹರಿಹರ ಪದವಿಯನು | ನಾಟ | ಕದ ರಚನೆಯಂತರಿವನೆ ವಿರಕ್ತ || ೫ || ಪರತರ ಭೋಗವನೆಲ್ಲ | ತೃಣಕೆ | ಸರಿಮಾಡಿ ನೋಡುವವನೆ ವಿರಕ್ತ || ಶರೀರ ಮೇಲಿನ ಸ್ಮೃತಿಕಳೆದು | ತ್ವರದಿ ಪರಮಾರ್ಥದೊಳು ಸುಖಿಸುವನೆ ವಿರಕ್ತ || ೬ || ನಿರವಧಿ ನಿರ್ಗುಣ ರೂಪ | ನಾದ | ಪರಮಾರೂಢರಾಮತಾನಾಗಿ ಮತ್ತೆ | ತರ ತೋರ್ಕೆಗಳೆಲ್ಲ ಸತ್ಯ | ವೆಂದು | ಪರಿಕಿಸಿ ಬಗೆವನೆ ಪರಮ ವಿರಕ್ತ || ೭ ||

### ೩೩ ನೇ ಪದ.

( ದಾಟಿ—ಈಶಾನುತಿಪೆ ನಿಮ್ಮ ನಾಮ ಎಂಬತೆ )

ಶ್ರೀಗುರುವಿನ ಪಾದಕಮಲಕೆ | ಬೇಗದಿಂದಲಿ ಆರತಿ ಬೆಳಗುವೆ || ಭೋಗ ನಾಶ ಮಾಡಿದಗೆ | ಯೋಗಾನಂದದಿ ಮೆರೆಯುವವನಿಗೆ || ಪ || ಆಗಮ ನಿಗಮಗಳು | ಜಾಗ್ರದಿಂದ ಸ್ತುತಿಪ ಮೂರ್ತಿಗೆ || ರಾಗ ರಹಿತ ಮಾಡಿದಗೆ | ಜಾಗರೂಕದಿಂದಲಿ ತಾನು ||೧|

ಲೋಕಕೀಶನಾದಗೆ | ಜೋಕೆಯಿಂದಲಿ ಭಕ್ತರಕ್ಷಕಗೆ || ಯೋಗೀಶ ವಂದಿತಗೆ | ಭಾಗ್ಯ ನಿಧಿಗೆ ತ್ವರಿತದಿ ನಾನು || ೨ || ಕಾಯಜ ವಿರೋಧಿಗೆ| ಮಾಯ ಮೋಹ ನಾಶ ಮಾಡಿದಗೆ || ಆಯಾಸ ನಾಶನಿಗೆ | ಆಯುಧ ತ್ರಿಶೂಲ ಧರನಿಗೆ || ೩ || ಸೂರ್ಯ ನೇತ್ರವುಳ್ಳಗೆ | ಕಾರ್ಯರಹಿತ ಮಾಡಿದವನಿಗೆ || ತೂರ್ಯಾತೀತ ರೂಪಗೆ | ಆರ್ಯರೂಪ ತಾಳಿದವನಿಗೆ || ೪ || ಸೋಮ ಪೂಷಣ ಮೂರ್ತಿಗೆ | ಹೇಮಗಿರಿಯೊಳ್ವಾಸ ಮಾಡಿದಗೆ || ಕಾಮಿತ ದಾತನಿಗೆ | ಶ್ರೀಮದ್ಗುರು ರಾಮಾರೂಢಗೆ || ೫ ||

ಶ್ರೀಮತ್ಸಚ್ಚಿದಾನಂದ ಸಂಯಮಿ ಶಿಖಾಮಣಿ ಶ್ರೀಯುತ ಪರಮಹಂಸ ಸದ್ಗುರು ರಾಮಾರೂಢರ ಪೂಜ್ಯಪಾದ ಶಿಷ್ಯ ಶ್ರೀಗುರು ಸಂಗಮೇಶ್ವರ ಕವಿಗಳಿಂದ ಮುಮುಕ್ಷಜನ ಹಿತಾರ್ಥವಾಗಿ ವಿರಚಿಸಲ್ಪಟ್ಟ ಕೈವಲ್ಯ ಪದ್ಧತಿಯೊಳು

ಜೀವಸಂಬೋಧನ ಸ್ಥಲವು

ಸಮಾಪ್ತ ಮಾದುದು.

|| ಇತಿ ಶುಭಮಸ್ತು ||



ಶ್ರೀಮತ್ಸದ್ಗುರು ರಾಮಾರೂಢಾಯನಮಃ

# ನೀತಿ ಕ್ರಿಯಾಚಾರ ಸ್ಥಲ.

## ೧ ನೇ ಪದ.

( ದಾಟಿ— ಶ್ರೀಗುರು ಶಿವನೆ ಕರುಣದಿಂದೆಲೆನಗೆ ಎಂಬಂತೆ )

ಶ್ರೀಗುರು ದೇವನೆ ಪರಿಪಾಲಿಸೆನ್ನನು | ಈಗಲೆ ನಿನ್ನಯಪಾದಕೆ ಮರೆಹೊಕ್ಕೆ || ಪಲ್ಲ || ಸಂಭವವೆಂಬಾರಣ್ಯದಲ್ಲಿ ಪರಿ | ಪರಿ ರೂಪದಿಂದ ತೊಳಲುವ ಜೀವರಿಗೆ || ಪರಮಾತ್ಮನ ಮಾರ್ಗವನೆ ತೋರಿಸುವಂಥ | ಗುರುವರ್ಯ ಕರುಣದಿಂದೆನ್ನನು ನೋಡಿ || ೧ || ಭವ ಮಹಾ ರೋಗ ನಿಚಯಕೆ ವೈದ್ಯನೆ | ಭವ ಭಯ ನಾಶನೆಯೋಗಿಜನ ವಂದ್ಯನೆ || ಪವಿತ್ರ ಪಾದನೆ ವಿವೇಕ ಧುರೀಣನೆ | ತವೆಯನ್ನಯ ಹೃದಯ ದೋಷವ ನಾಶಿಸಿ || ೨ || ನಿನ್ನಯ ನಸುನೋಟದಿಂದಲಜ್ಞಾನವನು | ಸನ್ನುತ ದಿನಕರಾದಿಗಳಿಂದಳಿಯದ || ಚನ್ನಾಗಿ ನಾಶವಮಾಡುವ ಗುರುತಿಲಕ | ಉನ್ನತ ನಿಜ ಸುಖವನಿತ್ತು ಈಗಲೆ ನೀ || ೩ || ಪಂಚ ಭೇದವನು ನಾಶಮಾಡಿದವನೆ | ಸಂಚಿತಾಗಾಮಿ ಕರ್ಮ ಮೀರಿದಂಥವನೆ || ಪಂಚಲಕ್ಷಣದಲ್ಲಿ ಬೆರೆದು ಮೆರೆಯುವನೆ | ಪಂಚ ಭ್ರಮೆಗಳನಳಿಸಿ ಯನ್ನಯ ನೀನು || ೪ || ವರವೇದಾಂತ ಸಾರನೆ ನತನರರ | ಸುರ ಧ್ರುಮನೆ ಸಕಲಕಾಧಾರ ಭೂತನೆ || ಚಿರ ಸುಖದ ಮರ್ಮನು ಪೇಳಿನೆಗೆ ನೀ | ಪರಮಾರೂಢರಾಮ ಬೇಗದಿಂ ರಕ್ಷಿಸು || ೫ ||

## ೨ ನೇ ಪದ.

( ದಾಟಿ— ನಿನ್ನ ಗುಣಗಳ ನೀನೆ ನುತಿಸಿ ಹಿಗ್ಗಲುಬೇಡ ಎಂಬಂತೆ )

ಮೂರು ಕರುಣದ ದೋಷವನ್ನು ಸಲೆ ನೀಗಿ | ಸಾರತರ ಸುಖವನು ಪಡೆಯೋ ನೀಮನುಜ || ಪ || ಜೀವ ಘಾತಕ ಹೆರರ ಧನವ ಕದಿಯುವದು | ಭಾವೆಯರ ಸಂಗವನು ಮೋದದಿಂ ಕೂಡುವದು || ಓವಿ ತ್ಯಜಿಸಿ ನೀನು ಪರಿಭವ ಕ್ಷಯಿಸುವ | ಪಾವನಾತ್ಮನ ಶೀ

ವೆ ಮಾಡಿ ಸುಖಪೊಂದು || ೧ || ಶಿಷ್ಟರ ನಿಂದಿಸುವದು ಕುಹಕ ಮಾತಾಡುವದು | ನಿಷ್ಠುರ ನುಡಿಯುವದು ಚಾಡ ಪೇಳುವದು || ನಿಷ್ಠುರದಿಂ ತ್ಯಾಜ್ಯಮಾಡಿ ಸೃಷ್ಟಿಗೊಡೆಯನನು | ನಿಷ್ಠೆಯಿಂ ಸ್ಮರಿಸುತ ಉನ್ನತಾನಂದ ಪೊಂದು || ೨ || ದೊರೆಯದ ಪದಾರ್ಥವನು ಬಯಸುವದು | ಪರಮಾನಂದಿಲ್ಲದ ವಿಷಯ ಮೆಚ್ಚುವದು || ಜರಿದು ರಾಮಾರೂಢರ ಚರಣದಲ್ಲಿ | ನಿರುತ ಮನವಿಟ್ಟು ಹರುಷವ ಪಡೆಯೋ ನೀ || ೩ ||

## ೩ ನೇ ಪದ.

( ದಾಟಿ— ಪಡಿವೆ ನೀನೆಂದಿಗೆ ಪರಮುಕ್ತಿ ಸುಖವನು ಎಂಬಂತೆ )

ಧರ್ಮವಮಾಡೊ ಮನುಜ ತ್ವರಿತದಿಂದಲಿ ನೀನು | ಧರ್ಮದಿಂದಲೆ ಸಕಲವಿಷಯಗಳು ಪ್ರಾಪ್ತಿ || ಪಲ್ಲ || ಧರ್ಮದಿಂದಲೆ ಸುಗುಣ ಜಗದೊಳು ಪರಾಕ್ರಮ | ಧರ್ಮದಿಂದಲೆ ವಿದ್ಯೆ ಸಕಲ ಕಾರ್ಯ ಸಿದ್ಧಿ || ಧರ್ಮದಿಂದಲೆ ಸ್ವರ್ಗಲೋಕಾದಿಗಳು ಪ್ರಾಪ್ತಿ | ಧರ್ಮದಿಂದಲೆ ವಶ್ಯ ಕುಲಜಾತಿ ರೂಪು || ೧ || ಗುರು ಪ್ರಾಪ್ತಿ ಗುರು ಶೇವೆ ಗುರು ಭಜನೆ ವಿನಯು | ಗುರು ಕೃಪೆಶಾಸ್ತ್ರಾರ್ಥಗಳ ಜ್ಞಾನ || ನರರ ವಂದನೆ ಪರಮ ಯತಿಗಳ ಪ್ರೇಮವು | ದೊರೆಯ ಬೇಕಾದರೆ ಧರ್ಮವಿಲ್ಲದೆ ಸಿಗವು || ೨ || ಏನೊಂದು ವಿಷಯವು ಧರ್ಮವಿಲ್ಲದೆ ಪ್ರಾಪ್ತಿ ಜ್ಞಾನವಂತರು ಶೃತಿಯು ಆಗದೆಂದೊರೆಯಲು || ಹೀನರ ಸಂಗ ಜರಿದು ಶ್ರೀರಾಮಾರೂಢರ | ಧ್ಯಾನಿಸುತ ನೀನು ಧರ್ಮವ ಜರಿಗಿಸೊ || ೩ ||

## ೪ ನೇ ಪದ.

( ದಾಟಿ— ಕೋಳಿಕೂಗಿತು ಮಗಳೆ ಬೆಳಗಾಯಿತು ಎಂಬಂತೆ )

ಲೇಸಾದ ಗುಣಗಳನೆಲ್ಲ ವರ್ಣಿಸುವೆನು | ಧ್ಯಾಸ ಹಿಡಿಯೊ ನರನೆ ನೀನೆಲ್ಲ ಗುಣವ || ಪ || ಧನವಿದ್ದಾಗಲೆ ಧರ್ಮ ಮಾಡ್ವದು ಲೇಸು | ನೆಣವಿದ್ದಾಗಲೆ ಗುರು ಶೇವೆ ಲೇಸು || ಗುಣವಿದ್ದಾಗಲೆ ಜ್ಞಾನಗಳಿಸುದು ಲೇಸು | ಅಣುಗನಿರುವಾಗಲೆ ವಿದ್ಯೆಕಲವ್ವುದು ಲೇ

ಸು || ೧ || ತಿಳಿಗೇಡಿ ನಿಂದಿಸಲು ತಾಳಿಕೊಳ್ಳುದು ಲೇಸು । ಮಳಲ ರೂಪ ಭವಕೆ ಅಂಜುದದು ಲೇಸು || ಸುಳ್ಳುವಾಣಿಯನಳಿದು ಸತ್ಯ ನುಡಿವುದು ಲೇಸು । ಒಳ್ಳಿತನದ ಮಾರ್ಗ ಪಿಡಿಯುವದತಿ ಲೇಸು ||೨|| ಬರಿದೆ ಕಾಲಕಳೆಯದೆ ಸುವಿಚಾರಲೇಸು | ಪರರ ನಿಂದೆಯು ಕಳೆದು ಪರಮನಾಗ್ವದುಲೇಸು || ಸಿರಿಬಂದ ಕಾಲಕೆ ಮೆರೆಯದಿರುವದು ಲೇಸು | ಶರೀರ ಭೂಷಣೆಯಳಿದು ನೀತಿ ಪೊಂದುದುಲೇಸು || ೩ || ಕೋಪವಳಿದು ಬೇಗ ಶಾಂತಿ ಪಿಡಿವದು ಲೇಸು | ಪಾಪಕೃತಿ ಮಾಡದೆ ಬಿಡುವದು ಲೇಸು || ತಾಪ ಹರನ ಸತತ ನೆನೆಯುವದು ಲೇಸು| ಶಾಪಗಳನು ಬೇಗಕಳೆದು ಕೊಳ್ವದುಲೇಸು || ೪ || ಅಷ್ಟಮದದೊಳು ನೆರೆ ಬೆರೆಯದಿರುವದುಲೇಸು | ದುಷ್ಟರ ಸಂಗವನು ಬಿಡುವದು ಲೇಸು || ಭ್ರಷ್ಟಮಾಡುವ ಆಶೆ ಬಿಟ್ಟು ಬಿಡುವದುಲೇಸು | ಶಿಷ್ಟರಾಮನ ಪೊಂದುವದು ಬಹು ಲೇಸು || ೫ ||

## ೫ ನೇ ಪದ.

( ದಾಟ— ಭೋಧಿಸೆನ್ನನು ಗುರುವೆ ಎಂಬಂತೆ. )

ಶಾಂತಿಯೆಂಬುವದೊಂದು | ಶ್ರೇಷ್ಟಗುಣವು | ಶಾಂತಿಧರಿಸೊ ಮನುಜ || ಶಾಂತಿಯೆ ಸಕಲ ಕಾರ್ಯಕ್ಕೆ ಭೂಷಣವು | ಶಾಂತಿಯಿಂದಲೆ ನಿನ್ನಕಾಂತಿ ಬೆಳಗುವದು || ಪ || ಶಾಂತಿಯೆ ಶರೀರಕೆ | ಭೂಷಣವು | ಶಾಂತಿಯೆ ನೀತಿ ಗುಣವು | ಶಾಂತಿಯೆ ಪುಣ್ಯದ ಮೂಲವೆಂದೆನಿಸುವದು | ಶಾಂತಿಯೆ ಸರ್ವರಿಗೆ ಪರಮ ಹಿತಕರವು || ೧ || ಶಾಂತಿಯೆ ಜಪ ತಪವು| ದುರಿತವೆಂಬ | ಕಾಂತಾರಕೆ ವಜ್ರವು || ಶಾಂತಿಯೆ ವೈರಿಗಳನು ಭಂಗಮಾಡುವದು | ಶಾಂತಿಯೆ ಪರಮಾಮೃತವನ್ನು ಕೊಡುವದು || ೨ || ಶಾಂತಿಯೆ ಪಾರಮಾರ್ಥ | ಸಾಧನವು | ಶಾಂತಿಯೆ ವಿನಯಗುಣವು || ಶಾಂತಿಯೆ ಶ್ರೀರಾಮಾರೂಢನ ಸುಖವೀವುದು | ಶಾಂತಿಯನೆ ಪೊಂದು ನೀಬೇಗದಿ ಮನುಜ || ೩ ||

## ೬ ನೇ ಪದ.

( ದಾಟಿ—ಮುಳುಗಿ ಹೋದೆಯಲ್ಲೊ ಭವದಲಿ ಎಂಬಂತೆ )

ದುಷ್ಟಜನರ ಗುಣಗ | ಳೆಲ್ಲವನಿಲ್ಲಿ | ಸ್ಪಷ್ಟ ಪೇಳುವೆನರಿಯ ರಿ || ಸೃಷ್ಟಿಯೊಳಗೆ ತನ್ನಸುಖವ ತಾನರಿಯದೆ | ಕಷ್ಟಕೆ ಗುರಿಯಾ ಗುವವನತಿ ದುಷ್ಟನು |ಪ|| ದುರುಳರ ಸಂಗವನು| ಮಾಡಿದವನು | ಧರಿಯೊಳಗತಿ ದುಷ್ಟನ: | ಪರಮಪಾವನನನು ಭಜಿಸದವ ದುಷ್ಟ | ಗುರುವಿಗೆ ನಿಂದೆಯ ನಾಡುವವ ಕಡುದುಷ್ಟ || ೧ || ಮುಂದೆ ಸ್ತುತಿ ಯನು ಮಾಡಿ| ಸಜ್ಜನರನು| ಹಿಂದೆ ಹಳಿಯುವವದುಷ್ಟ || ಒಂದೆ ನಿ ಷ್ಠೆಯಿಂದ ನಡೆಯದವನು ದುಷ್ಟ | ತಂದೆ ತಾಯಿಗಳಿಗೆ ಪೀಡಿಸುವ ವದುಷ್ಟ || ೨ || ಪರಮ ಶ್ರುತಿ ಪಂಥವನು | ಪಿಡಿಯದೆ | ದುರಿತ ಪಿಡಿವವದುಷ್ಟ || ಗುರು ರಾಮಾರೂಢರ ಪಾದಕೆ ವಿನಯದಿಂ| ಎರ ಗದವನು ಸೃಷ್ಟಿಯೊಳಗತಿ ದುಷ್ಟನು || ೩ ||

## ೭ ನೇ ಪದ.

( ದಾಟ—ಆರೇನು ಮಾಡುವರು ಎಂಬಂತೆ )

ಸಕಲ ಗುಣಗಳೊಳು ಶ್ರೇಷ್ಠ ಗುಣಗಳ | ನಿಕರವ ಪೇಳುವೆ ನು ಕೇಳು ಮನುಜ || ಪಲ್ಲ || ಸಕಲ ಪಾಪದೊಳು ದೇಹಾನೆಂಬು ದೆ ಶ್ರೇಷ್ಟ | ಸಕಲ ಪುಣ್ಯದೊಳರುವು ನಾನೆಂಬುದೆ ಶ್ರೇಷ್ಟ || ಸಕ ಲ ವಿಷಯದೊಳು ಸ್ತ್ರೀಯೆಂಬುದೆ ಶ್ರೇಷ್ಟ| ಸಕಲ ಬಾಧೆಗಳೊಳು ಕಾ ಮ ಬಾಧೆ ಶ್ರೇಷ್ಟ || ೧ || ಸಕಲ ವೈರಿಗಳೊಳು ಕ್ರೋಧವೆಂಬುದೆ ಶ್ರೇಷ್ಟ | ಸಕಲ ಬಂಧುಗಳೊಳು ವಿದ್ಯೆಯೆಂಬುದೆ ಶ್ರೇಷ್ಟ || ಸಕಲ ದೇವರೊಳು ಶಿವನೆ ಬಹು ಶ್ರೇಷ್ಟ | ಸಕಲಾನಂದದೊಳು ಜ್ಞಾನಾ ನಂದವೆ ಶ್ರೇಷ್ಟ || ೨ || ಸಕಲ ಸೂತ್ರದೊಳು ವ್ಯಾಸಸೂತ್ರವೆ ಶ್ರೇಷ | ಸಕಲ ಭಾಷ್ಯದೊಳು ಶಂಕರ ಭಾಷ್ಯ ಶ್ರೇಷ್ಟ | ಸಕಲ ಶಾಸ್ತ್ರದೊ ಳು ವೇದಾಂತವೆ ಶ್ರೇಷ್ಟ| ಸಕಲ ವಿರತಿಯೊಳು ಪರವೆಂಬುದೆ ಶ್ರೇ ಷ್ಟ || ೩ || ಸಕಲ ಜಲ್ಮದೊಳು ನರಜಲ್ಮವೇಶ್ರೇಷ್ಟ ' ಸಕಲ ತಪ

ದೊಳು ಸತ್ಯವೆಂಬುದೆಶ್ರೇಷ್ಟ| ಸಕಲಕೇಡಿನೊಳು ಭೇದವೆಂಬುದೆ ಶ್ರೇಷ್ಟ | ಸಕಲ ಲಾಭದೊಳು ಬ್ರಹ್ಮಲಾಭನೆ ಶ್ರೇಷ್ಟ || ೪ || ಸಕಲ ಬಂಧ ದೊಳು ಭವ ಬಂಧವೆ ಶ್ರೇಷ್ಟ | ಸಕಲ ಜ್ಞಾನದೊಳು ಬ್ರಹ್ಮಜ್ಞಾನವೆ ಶ್ರೇಷ್ಟ || ಸಕಲ ಪದವಿಗಳೊಳು ಶ್ರೀರಾಮಾರೂಢರ ಅಕಲಂಕ ನಿಜಾನಂದ ಪದವಿ ಬಹುಶ್ರೇಷ್ಟ || ೫ ||

## ೮ ನೇ ಪದ.

( ದಾಟಿ—ಮಾಡಲುಚಿತವೆ ಮನುಜ ಎಂಬಂತೆ. )

ಒಲುಮೆಯಾಗದು ಶಿವನ | ಒಲುಮೆಯಾಗದು || ಕಲುಷ ಕೃತಿಯ ಬಿಡದೆ ನರನೆ | ನಲಿದು ಶಿವನ ಧ್ಯಾನ ಮಾಡಲು || ಪಲ್ಲ || ಪರರನಿಂದೆ ಪೈಶೂನ್ಯತೆ | ಪರಪೀಡಕ ನಿರ್ದಯತನ || ಪರಹಿಂಸೆ ಕಪಟ ಭಾವ | ಜರಿಯದೆ ಸ್ಮರಿಸುತಿರಲು || ೧ || ಪರ ಧನ ಸ್ತ್ರೀ ಮೊದಲಾದ | ದುರಿತ ಅರ್ಥಗಳು ತೊಡಗಿದ | ದುರುಳ ಮನವ ತೆಗೆಯಲಾರದೆ | ಪರಮಾತ್ಮನ ನೆನೆಯುತಿರಲು || ೨ || ಕುಟಿಲ ಕುಚ್ಛಿತ ಯುಕ್ತಿಗಳನು | ನಿಷ್ಠುರತನದ ವಾಣಿಯನ್ನು || ದುಷ್ಟಜನರ ಸಂಗಮೋಹ| ನಿಷ್ಠುರದಿಂದ ತ್ಯಜಿಸದೆ || ೩ || ಸೃಷ್ಟಿಯೊಳಗೆ ನಾನೇ ಹಳ | ಶಿಷ್ಟನೆಂದು ತ್ವರಿತದಿಂದ || ಅಷ್ಟಮದದಿ ಮೆರೆಯುವಂಥ| ದಷ್ಟ ಗರ್ವವನ್ನು ಬಿಡದೆ || ೪ || ರಾಗದ್ವೇಷ ಗುಣಗಳನ್ನು | ಬೇಗ ದಿಂದ ವಿಸರ್ಜಿಸದೆ || ಯೋಗಾನಂದ ರಾಮಾರೂಢನ | ಬೇಗದಿಂ ಸ್ಮರಿಸುತಿರಲು || ೫ ||

## ೯ ನೇ ಪದ.

( ದಾಟಿ— ವರಕವಿಗಳ ಮುಂದೆ ಎಂಬಂತೆ. )

ದುರ್ಗುಣಗಳ ಸಂಗವನುದಿನ ಮನದೊಳು ಕೂಡಬಾರದ ನಿರ್ಗುಣ ಪರ ಶಿವನನು ಸತತ ಮರೆಯಬಾರದು || ಪಲ್ಲ || ತನಗಿಂ ಶ್ರೇಷ್ಟರಮುಂದೆ ತನ್ನವಿದ್ಯೆ ತೋರಬಾರದು | ತನ್ನ ಸರಿಜನರೊ ಮುಂದೆ ತಾನಾಗದೆ ನಿಲ್ಲಬಾರದು || ೧ || ಅತಿ ರೂಪ ಸ್ತ್ರೀಯಳ

ರೆನೋಡಿ ಭ್ರಾಂತಿಯ ಪೊಂದಬಾರದು | ಹಿತವಿಲ್ಲದವರ ಮುಂದೆ ಸ ಡಗರದಿ ಮೆರೆಯ ಬಾರದು || ೨ || ಧನವಿದ್ದಕಾಲಕೆ ಧರ್ಮವಮಾಡ ದೆ ಲೋಭ ಮಾಡಬಾರದು | ಅನಿಮಿತ್ತವಲ್ಲದ ಬಂಧು ಬಳಗವನು ಕೂಡಬಾರದು || ೩ || ಪರರೈಶ್ವರ್ಯ ನೋಡಿ ಮನದೊಳಗೆ ತಾಕು ದಿಯಬಾರದು | ಶರಣರೋಳ್ ವರ್ಮವ ಸಾಧಿಸಿ ನರಕಕೆ ಬೀಳಬಾ ರದು || ೪ || ಧರೆಯೊಳಗಿನ ಸಕಲ ಪದಾರ್ಥಗಳಿಗಾಸೆ ಮಾಡಬಾ ರದು | ಗುರು ರಾಮಾರೂಢರ ಚರಣಕೆ ಪೊಂದದೆ ಇರಬಾರದು || ೫ ||

೧೦ ನೇ ಪದ

( ದಾಟಿ—ಮೂರ್ತಿಮಂತ ಭೀತಿಯುಭೆ ಎಂಬಂತೆ. )

ಲೋಕಪಾಲನ ಧ್ಯಾನಮಾಡೊ | ಜೋಕೆ ಮಾಡುವ ಮಾನ ವಾ | ಕಾಕುಗುಣವನಳಿದು ನೀನು | ಜೋಕೆಮಾಡೆನುತ ಬೇಗ ದಿ || ಪ || ಸತ್ಯಮಾರ್ಗ ಸುಗುರು ಭಕ್ತಿ | ಸತ್ಯ ವಚನ ದಿಂದಲಿನೀ || ನಿತ್ಯಾನಂದ ಪಾಲಿಸೆಂದು | ಭೃತ್ಯನಾಗಿ ನೀನು ಸತತ || ೧ || ಸತ್ಯಶೀಲ ವಿನಯದಿಂದ | ಸತ್ಯಚರ್ಚೆ ಮಾಡುತ | ಸತ್ಯಜ್ಞಾನ ಪಾಲಿಸೆಂದು | ಸತ್ವರದಿಂದ ಮನುಜನೆ || ೨ || ಸರ್ವಜೀವ ರೋ ಳ್ಮೋದವಿಟ್ಟು | ಸರ್ವವಿಷಯ ತ್ಯಜಿಸಿ ನೀ || ಸರ್ವಜ್ಞಾನ ಪಾಲಿ ಸೆಂದು | ಸರ್ವಕಾಲದಿ ಶೇವಿಸುತ || ೩ || ಅಷ್ಟವಿಧದಿ ಅರ್ಚಿಸುತ | ಶಿಷ್ಟಮಂತ್ರ ಜಪಿಸುತ || ದುಷ್ಟಭವವ ನಾಶಿಸೆಂದು | ನಿಷ್ಠೆಯಿಂದ ಮನುಜನೆ || ೪ || ಶಮೆದ ಮಾದಿವಂತನಾಗಿ | ಅಮಳಕರ್ಮ ಮಾ ಡುತನೀ || ವಿಮಲ ಮೋಕ್ಷ ಪಾಲಿಸೆಂದು | ಅಮಲಾರೂಢ ರಾಮನ || ೫ ||

೧೧ ನೇ ಪದ.

( ದಾಟಿ—ಕ್ಷಮಿಸೆನ್ನಯ ಅಪರಾಧವ ಎಂಬಂತೆ. )

ವರಗಳ ಬೇಡೊ ನೀ ಮನುಜನೆ ಬೇಗ | ವರಗಳ ಬೇಡೊ ನೀ || ಪ || ಪರಮಾಮೃತವೆಂಬ | ಪರಮ ವರಗಳ | ಪರಕಿಸಿ ತ್ವರಿತದಿ

ಪರಮಾತ್ಮನಲಿ ನೀ || ೧ || ಮನದೊಳು ಭಕ್ತಿ ಧನದೊಳ್ವಿರಕ್ತಿ | ಚಿನುಮಯಾತ್ಮನ ಶೇವೆಯ ಮಾಡುವಂಥ || ೨ || ನೀಲಕಂದರನಂ ಜಿಹ್ವೆಯೊಳಗೆ | ಕಾಲಕಾಲಕೆ ಧ್ಯಾನವ ಮಾಡುವಂಥ || ೩ || ಬಿಂದು ಸಂಬಂಧವಾದ ಕಾಂತಿಗಳನ್ನು | ಚಂದವಾಗಿ ನೋಡಿ ನೆರೆ ನಲಿಯುವಂಥ || ೪ || ಜ್ಞಾನಿಗಳ ಮರ್ಮವನನು ದಿನದೊಳು | ಜಾನಿಸಿ ತಿಳಿದು ಸಂಗವ ಮಾಡುವಂಥ || ೫ || ಸತತ ಬ್ರಹ್ಮಾನು ಸಂಧಾನವೆಂಬ | ಹಿತವಹಿತ ನೆರೆ ತಿಳಿಯುವಂಥ || ೬ || ಜೀವ ಶಿವೈಕ್ಯವನೋವಿಮಾಡುತ ನೀ | ದೇವ ರಾಮಾರೂಢನ ಸುಖವ ನೋಡುವಂಥ || ೭ ||

೧೨ ನೇ ಪದ.

( ದಾಟಿ- -ಮಂದಮತಿ ನಿಂದಿಸಲು ತಾಳಿಕೊಂಡವ ಜಾಣ, ಎಂಬಂತೆ )

ಪುಂಗ ವಿದ್ವಾಂಸಕನಲ್ಲದ ನೃಪಾಲನಿದ್ದೇನು | ತುಂಗ ಧಾರ್ಮಿಕನಲ್ಲದ ಮಂತ್ರಿಯಿದ್ದೇನು | ಅಂಗ ಲಿಂಗೈಕ್ಯವರಿಯದ ಜಂಗಮನಿದ್ದೇನು | ಐಶ್ವರ್ಯವಾನನಿದ್ದು || ಮಂಗಲ ಮೂರ್ತಿಯ ನೆನೆಯದವನಿದ್ದೇನು | ಭಂಗಿ ಶೆರೆ ಪಾನಮಾಡುವ ಸಾಧುವಿದ್ದೇನು | ಮಂಗಮನವನು ಭಂಗಮಾಡದ | ಧೀರನಿದ್ದೇನು ಫಲವು ಪೇಳ ಮನುಜ || ೧ || ಸನ್ನುತನುಭವವಿಲ್ಲದೆ ಶಾಸ್ತ್ರ ಕಲಿತವನಿದ್ದೇನು ಉನ್ನತ ಶೃತಿಮತವ ಪಿಡಿಯದ ವೈಧಿಕನಿದ್ದೇನು | ಉನ್ನತೋನ್ನತ ಪಂಡಿತರಿಗೆ ಮನ್ನಿಸದವನಿದ್ದೇನು ಫಲವರ್ಥವನರಿಯದೆ || ಸನ್ನುತಾಗಮ ನಿಗಮವನೋದುವವನಿದ್ದೇನು | ನನ್ನಿಪಥವ ಪಿಡಿಯದ ಪಂಡಿತನಿದ್ದೇನು | ಚನ್ನಾಗಿ ಜಗದೊಳು ಪೂಜ್ಯಗೊಳ್ಳುವವನಿದ್ದೇನ ಫಲವು ಜ್ಞಾನವಿಲ್ಲದೆ || ೨ || ಗುರುವಚನವ ಕೇಳದ ಶಿಷ್ಯನಿದ್ದೇನು ಉರುತರ ಕರುಣವಿಲ್ಲದ ಗುರುವರನಿದ್ದೇನು | ಪರಮ ವಿರತಿಯಿಲ್ಲದ ಸನ್ಯಾಸಿ ಇದ್ದೇನು ಫಲವು ಲೋಕದೊಳಗೆ || ಪರಶಿವನ ನೆಲೆಗಾಣದ ಜಾಣನಿದ್ದೇನು | ಪರಮಾನುಭವವಿಲ್ಲದ ಶಾಸ್ತ್ರವಿದ್ದೇನು | ಗುರು ರಾಮಾರೂಢರ ಸುಖವ ಸವಿಯದ ಶರಣನಿದ್ದೇನು ಫಲ ಮನುಜಾ || ೩

## ೧೩ ನೇ ಪದ.

( ದಾಟಿ—ಪಡಿವೆ ನೀನೆಂದಿಗೆ ಪರಮುಕ್ತಿ ಸುಖವನು ಎಂಬಂತೆ. )

ಸುಮ್ಮನಾಗದು ಮುಕ್ತಿಯಿಲ್ಲದೆ ನಿಜಭಕ್ತಿ | ಹಮ್ಮವ ನಳಿಯದೆ ಸುಗುಣವ ಪಡೆಯದೆ || ಪ || ಗುರುಭಕ್ತಿ ಶರಣರ ಸಂಗವ ಮಾಡದೆ | ದುರಿತ ದುರ್ಗು ಣವ ಪೋಗಿಸದೆ ಮತ್ತೆ || ವಿರತಿ ವಿವೇಕವ ಶಮೆ ದಮೆ ಸಾಧನವತ್ವರಿತದಿ ಕೂಡದೆ | ಗುರು ಶೇವೆ ಮಾಡದೆ || ೧ || ವೇದಶಾಸ್ತ್ರದೊಳು ನಂಬುಗೆಯಿಲ್ಲದೆ | ವಾದಗುಣಗಳನು ಶೀಘ್ರದಿ ಕಳೆಯದೆ || ಭೇದ ಭಾವನೆಯನು ಚನ್ನಾಗಿ ಜರಿಯದೆ | ಮೋದವ ನಿಡದೆ ಸಕಲಜೀವರೊಳು || ೨ || ಸುಮಶರನಾಶನ ಪ್ರೇಮದಿ ಅರ್ಚಿಸದೆ | ವಿಮಲ ಬುದ್ಧಿಯಿಂದ ಯೋಗವ ಮಾಡದೆ|| ಮಮಕಾರವನ್ನು ಚನ್ನಾಗಿತ್ಯಜಿಸದೆ | ಅಮಲಾ ರೂಢರಾಮನ ಪಾದವ ಪೊಂದದೆ||೩||

## ೧೪ನೇ ಪದ.

( ದಾಟಿ—ಶ್ರೀಗುರುವರೇಣ್ಯನ ಎಂಬಂತೆ )

ದುರಿತ ಸಂಸಾರವ ಪರಿಹರಿಸುವದಕೆ | ಹರನಾಮವಂದಿದ್ದರೆ ಸಾಕು ಮನುಜ ||ಪಲ್ಲ|| ನಿತ್ಯಸ್ನಾನ ಜಪತಪವನು ಮಾಡಿ ನೀ | ನಿತ್ಯ ಮೋಸದೊಳು ಸಂಚರಿಸಬೇಡಾ | ಸತ್ಯ ಜನರ ಪರಿಪಾಲಿಸು ವೀಶನ | ನಿತ್ಯದಲಿ ಸೆನೆದು ಧನ್ಯನಾಗೊ ಮನುಜ || ೧ || ಉನ್ನ ತೋನ್ನತ ತೀರ್ಥಯಾತ್ರೆಯ ಮಾಡಿನಾ| ಧನ್ಯನಾದೆ ನೆಂಬಹಂಕಾರವು ಬೇಡಾ | ಸನ್ನುತಾಗಮ ನಿಗಮ ಪೊಗಳುವ ಮೂರ್ತಿಯ| ಚಿನದಿ ಭಜನೆ ಮಾಡಿ ಸುಖಿಯಾಗೊ ಮನುಜ || ೨ || ಸತಿಸುತರ ಬಿಟ್ಟು ಯತಿಯಾಗಬೇಡಾ | ಶ್ರುತಿಶಾಸ್ತ್ರರಿವೆನೆಂಬ ಭ್ರಾಂತಿಯ ಬೇಡಾ || ಅತಿಗತ ಮಾಯ ಶ್ರೀಗುರು ರಾಮಾರೂಢನ | ಸತತ ಭೇದ್ದದಿಂ ಭಜಿಸಿ ಸುಖಪೊಂದು || ೩ ||

## ೧೫ ನೇ ಪದ.

( ದಾಟಿ— ಕಾಯೊ ಯನ್ನ ದೇವ ದೇವ ಎಂಬಂತೆ. )

ಚಿಂತೆಯಾತಕೋ ಮಾನವಾ | ಕಂತು ಹರನೆ ಸಲಹುವ ||

||ಪಲ್ಲ|| ಚಿಂತೆಯುಳಿದು ಸಂತಸದಿಂ | ದಂತಕಾರಿಯ ನೆನೆಯೊ ನೀ ||
ಅನುಪಲ್ಲ|| ಜನನಿ ಕುಕ್ಷಿಯೊಳಿರುವಾಗ | ಬಿನದಿ ರಕ್ಷಿಪರ್ಯಾರಾಗ |
ಚಿನುಮಯ ಶ್ರೀಮಹಾದೇವನ | ವನೆ ಅಲ್ಲಿನೋ ಜೀವ ||೧||
ಲಕ್ಷ ಎಂಭತ್ತುನಾಲ್ಕು ಜೀವ | ಕುಕ್ಷಿಯೊಳಿಟ್ಟುಕೊಂಡ ಭವ ||
ರಕ್ಷಿಸುವದಿಲ್ಲವೇ ನರ | ಪಕ್ಷಪಾತ ರಹಿತಹರ ||೨|| ನಂದ ಪಿಂಗಿ
ಕಷ್ಟವಾಯಿ | ತೆಂದು ನೀನಳಲದಿರು || ಹಿಂದಿನ ನಳ ಪಾಂಡವರ |
ಅಂದನೋಡಿ ನಿನ್ನ ಕೇಡಿಗೆ ||೩|| ಆರಿಗಾದರೂ ಪೂರ್ವ ಕರ್ಮ |
ಸಾರಿ ಉಣಿಸದೆ ಬಿಡದು || ಶೂರ ಬ್ರಹ್ಮಾದಿಗಳಿಗೆ | ಮೀರುವದಾಗಿ
ಲ್ಲವು ||೪|| ಚಿಂತೆಯುಳಿದಾರೂಢ ರಾಮನ | ಸಂತತಿಯು ಬೆರೆಯ
ಲು || ಚಿಂತಿಯನೆ ಕಳೆದು ನಿ | ರಂತರಿರುವಾನಂದ ಕೊಡುವಾ ||೫||

೧೬ ನೇ ಪದ.

( ದಾಟ—ಆವ ಮೋವ ಮನಗುರು ಎಂಬಂತೆ )

ಸುಖಿಯಾಗೊ ಸುಖಿಯಾಗೊ ಸುಖಿಯಾಗೊ ನೀನು ಪಂಚ |
ಮುಖನನು ಭಜಿಸುತ ಮಾನವನೆ ||ಪ|| ನಿಖಿಳ ದುರ್ಗುಣಗಳ
ಚನ್ನಾಗಿ ವಿಸರ್ಜಿಸಿ | ಶಿಖಿನೇತ್ರನ ನೇಮ ಭರದಿ ಕೈಕೊಂಡು ||
ಅನುಪಲ್ಲ || ಅಷ್ಟಮದಗಳೆಂಬ ಶಿಷ್ಟಗಜಗಳನು | ಸ್ಪಷ್ಟವಾಗಿ ಭರ
ದಿ ನಷ್ಟಮಾಡಿನೀ | ದುಷ್ಟಜನರ ನಶಿಸಿ ಶಿಷ್ಟರ ಪಾಲಿಸುವ | ಇಷ್ಟ
ಈಶನ ನೀ ನಿಷ್ಠೆಯಿಂದಾರ್ಚಿಸಿ ||೧|| ಆರು ವರ್ಗವೆಂಬ ಶೂರ
ವ್ಯಾಘ್ರಗಳನು | ದೂರಮಾಡಿ ಗುರುವರನ ಶೇವೆಯನು || ಧಾರುಣಿ
ಯೊಳಗೆ ನೀನು ಭೂರಿ ಮಾಡಿ ಮನುಜನೆ | ಸಾರತರದ ಸುಖವ
ಶೇರಿನೀಬೇಗ ||೨|| ತ್ರುತಿಯೀಷಣವೆಂಬ ಅತಿಶೂರ ಸಿಂಹಗಳನು |
ಹತಮಾಡಿ ಶ್ರುತಿ ತತಿ ವೇದ್ಯನಾದ | ನಿತ್ಯಮುಕ್ತ ಶ್ರೀಗುರುರಾಮಾ
ರೂಢನ | ಸತ್ಯದಾಸನಾಗಿ ನಿತ್ಯಸುಖಪೊಂದಿ ||೩||

೧೭ ನೇ ಪದ.

( ದಾಟ—ಸುಖಿಯಾಗೊ ಸುಖಿಯಾಗೊ ಎಂಬಂತೆ )

ಮಾಡಬೇಡೆಲೆ ಮನವೆ ಖೋಡಿ ಗುಣಗಳ ಸಂಗ | ನಾಡೆ

ಸುಗುಣಗಳ ಬಿಡಬೇಡಾ || ಖೋಡಿ ಮನುಜರನು ಸರಿಗಟ್ಟಿಕೊಳ್ಳ ಬೇಡಾ | ನಾಡಿಗೊಡೆಯನ ಪಾದ ಮರಿಯಬೇಡಾ || ಪಲ್ಲ || ಹೀನರ ಚಯದಲಿ ವಾಸಮಾಡಬೇಡಾ | ಜ್ಞಾನಿಗಳ ಸಂಗವ ಬಿಡಬೇಡಾ|| ಮಾನವಂತರ ನೋಡಿ ಹೀಯಾಳಿಸಬೇಡಾ | ದಾನದೊಳಗನ್ನದಾನವ ಬಿಡಬೇಡಾ || ೧ || ಪರಸತಿಯರನು ನೇತ್ರದಿಂ ನೋಡಬೇಡಾ | ಶರಣರ ಶೇವೆಯ ಜರಿಯಬೇಡಾ || ಪರರ ಧನದ ಮೇಲಾಶೆ ಮಾಡಬೇಡಾ | ಪರರುಪಕಾರವನು ಮರೆಯಬೇಡಾ || ೨ || ಅರಿವರ್ಗಗಳನು ಪೊಂದಿಕೊಂಡು ಕೆಡಬೇಡಾ | ವರಯೋಗಿಯೆನಿಸದೆ ಇರಬೇಡಾ || ಧರೆಯೊಳೊಬ್ಬರ ಕೂಡ ವೈರತ್ವಮಾಡಬೇಡಾ | ನಿರಂತರ ಸತ್ಯವಚನ ಬಿಡಬೇಡಾ || ೩ || ವರವೇದ ವಿರಹಿತ ಮತವ ಪಿಡಿಯಬೇಡಾ | ವಿರತಿಯನಳಿದು ನೀನಿರಬೇಡಾ || ಸಿರಿಬಂದ ಕಾಲದಲಿ ಹರುಷಪಡಬೇಡಾ | ವರ ತೀರ್ಥಯಾತ್ರೆಯನು ಬಿಡಬೇಡಾ ||೪|| ಲೋಕದೊಳು ಕ್ರಮತಪ್ಪಿ ನಡೆದು ಕೆಡಬೇಡಾ | ಶೋಕ ಮೋಹ ಕಳೆಯದೆ ನಿಲ್ಲಬೇಡಾ || ತ್ರಿಲೋಕೇಶನಾದ ಗುರು ರಾಮಾರೂಢನ ಪಾದ | ಜೋಕೆಯಿಂದಲಿ ಪಿಡಿದು ಬಿಡಬೇಡಾ || ೫ ||

## ೧೮ ನೇ ಪದ.

( ದಾಟಿ—ನಂಬಬೇಡವೊ ಮನುಜ, ಎಂಬಂತೆ. )

ದೊರಿಯಲಾರದು | ಸುಖವ | ದೊರಿಯಲಾರದು || ಕರಣ ಮೂರರಲ್ಲಿ ತಪವ | ಜರಗಿಸದೆ ಮನುಜ ನೀನು || ಪ || ಅನಘನಾರ್ಚನೆ ನಿತ್ಯ ಕರ್ಮ | ಚಿನುಮಯ ಶ್ರೀಗುರುಶೇವೆ || ವಿನುತ ತೀರ್ಥಯಾತ್ರೆಗಳನು | ಬಿನದಿ ಮಾಡದೆ ತನುವಿನಿಂದ ||೧|| ಪರುಪಕಾರ ವಿನಯವಾಣಿ | ಪರಮ ಮಂತ್ರ ವಿನುತ ಶಬ್ದ || ನಿರುತ ಸತ್ಯ ವಿನಿತು ಭಾಷೆ | ಪರಿಗ್ರಹಿಸದೆ ವಚನದಲಿ || ೨ || ವಿರತಿ ವಿವೇಕಾದಿಯಿಂದ | ಪರಮಾರ್ಥ ಧ್ಯಾನದಿಂದ || ಪರಮಜ್ಞಾನ ಸತ್ಯಾನಂದ | ದೊರಕಿಸದೆ ನೀ ಮನಸಿನಲ್ಲಿ || ೩ ||

## ೧೯ ನೇ ಪದ.

( ದಾಟಿ—ಬಿರೆಯಬಾರದೆ ಮನುಜ, ಎಂಬಂತೆ. )

ಮಾಡು ಜಪವನು | ಮನುಜ | ಮಾಡು ಜಪವನು || ಕೂಡಿ ಸುಗುಣದೊಡನೆ ನೀನು | ನಾಡೆ ಪರಮ ಪಂಚಾಕ್ಷರಿಯ ||ಪ|| ಸಕಲ ವಿಷಯಗಳನು ಅಳಿದು | ಭಕುತಿಯಿಂದ ನಿತ್ಯದೊಳು || ಸಕಲ ಮಂತ್ರದೊಳಗೆ ಶ್ರೇಷ್ಟ | ಅಕಲಂಕ ಶಿವ ಮಂತ್ರವ ||೧|| ಒಂದು ವೇಳೆ ಜಪಿಸುತಿರಲು | ಹಿಂದೆ ಮಾಡಿದ ಸಕಲ ಪಾಪ || ಬೆಂದು ಪೋಪುದು ಪರಿಪಟ್ಟು | ಎಂದು ಶ್ರುತಿಯು ಪೇಳುತಿರಲು || ೨ || ಆನೆಯನೇರಿದವಂಗೆ | ಶ್ವಾನನ ಭಯವಿಲ್ಲದಂತೆ || ಜ್ಞಾನಮೂರ್ತಿಯನು ನೆನೆಯಲು | ಹೀನ ಭವದ ಬಾಧೆಯಿಲ್ಲ || ೩ || ತರಣಿಯುದ್ಭವವಾಗಲಾಗ | ಹರಿದು ಪೋಗುವಂತೆ ತಮವು || ಹರನ ಧ್ಯಾನೋದಯವಾಗಲು | ಮರವೆ ನಿಶ್ಶೇಷ ಪೋಗುವದು || ೪ || ನಿರುತ ಸನ್ಮಾರ್ಗವ ಪಿಡಿದು | ಪರನೆನಿಸಿದಾ ರೂಢರಾಮನ || ಹರುಷದಿಂದ ಭಜಿಸೆ ನಿನಗೆ | ಪರಮ ಸುಖವ ನೀವ ಮನುಜ || ೫

## ೨೦ ನೇ ಪದ.

( ದಾಟಿ—ದೊರವಿಲ್ಲವೊ ಮುಕ್ತಿ ಎಂಬಂತೆ. )

ಸೇವೆಮಾಡೊ ನೀ | ಮನುಜ | ಸೇವೆಮಾಡೊ ನೀ || ಜೀವೇಶೈಕ್ಯ ಶ್ರೀಗುರುವಿನ | ಪಾವನಾತ್ಮನೆಂದು ಭಜಿಸಿ || ಪಲ್ಲ || ಗುರುವೆಬಹ್ಮವಿಷ್ಣುವೆಂದು || ಗುರುವೆರುದ್ರರೂಪನೆಂದು || ಗುರುವೆ ನಿರ್ಗುಣಾತ್ಮನೆಂದು | ಗುರುವೆ ಸಕಲ ಶ್ರೇಷ್ಠನೆಂದು || ೧ || ಗುರುವೆ ಸರ್ವ ತೀರ್ಥವೆಂದು | ಗುರುವೆ ಬಂಧು ಬಳಗವೆಂದು || ಗುರುವೆ ಶಿಕ್ಷಕರ್ತನೆಂದು | ಗುರುವೆ ಮೋಕ್ಷದಾತನೆಂದು || ೨ || ನಿರಹಂಕಾರ ನಿರಪೇಕ್ಷ| ಸರಸವಾಣಿ ಸುಸ್ಥಿರ ಬುದ್ಧಿ | ಪರಹಿತನು ಸುಕರುಣವಂತ | ವರವಿರಕ್ತನೆಂದೆನಿಸಿ || ೩ || ಗುರುವೆಸರ್ವ ದಾತನೆಂದು | ಗುರುವೆ ತೀರ್ಥೋತ್ತಮನೆಂದು || ಶರೀರ ದ್ರವ್ಯ ಮನವನ್ನು | ಹರುಷ

ದಿಂದರ್ಪಿಸಿ ಬೇಗ || ೪ || ನಿರವಧಿ ನಿರುಪಮನಾದ | ಪರಮಾರೂಢ ರಾಮನನ್ನು | ನಿರುತ ಶೇವಿಸಿ ಭಕ್ತಿಯಿಂದ | ವರಪುರುಷಾರ್ಥವನು ಪೊಂದು || ೫ ||

೨೧ ನೇ ಪದ.

( ದಾಟಿ—ಗುರುವರನೆ ನಿನಗಿಂತರಧಿಕರಾರುಂಟು ಎಂಬಂತೆ. )

ವಿದ್ಯಯನೆ ಗಳಿಸೊ ಎಲೆ ಮಂದ ಮನುಜ | ವಿದ್ಯೆಯಿಲ್ಲದೆ ಸುಖವು ದೊರೆಯಲಾರದು || ಪಲ್ಲ || ಅರಸನಾದರೂ ಸಹ ಸ್ವಲೋಕ ಪೂಜ್ಯನು | ಪರಲೋಕದೊಳ್ಪೋಗಲು ದಾರು ಕೇಳುವರು || ಪರಮ ವಿದ್ವಾಂಸಕ ಪುರುಷನೆಲ್ಲಿದ್ದರೂ | ವರನೆನಿಸಿ ಪೂಜ್ಯಗೊಂಬನು ಮನುಜ || ೧ || ಧನವಗಳಿಸಲು ನಿನಗೆ ಭೂಪತಿ ಚೋರ | ರನು ಜರರಿಗಳ ಭೀತಿ ತಪ್ಪಲಾರದು || ಇನಿತೆಲ್ಲ ತಿಳಿದು ನೀ ವಿದ್ಯೆಯನೆ ಗಳಿಸಲು | ಮನುಜ ನಿನಗಾರದು ಭೀತಿಯಿಲ್ಲವು || ೨ || ವಿದ್ಯೆಯಿಂದಲೆ ಮಾನ ವಿದ್ಯೆಯಿಂದಲೆ ಕೀರ್ತಿ | ವಿದ್ಯೆಯಿಂದಲೆ ಧನವು ಸುಖವು ದೊರೆಯುವದು || ವಿದ್ಯೆಯನೆ ಗಳಿಸಿ ನೀ ಶ್ರೀರಾಮಾರೂಢನ | ಸದ್ಗತಿಯನೆ ಪೊಂದಿ ಸುಖಿಸು ಮನುಜ || ೩ ||

೨೨ ನೇ ಪದ.

( ದಾಟಿ—ಗುರುದೇವನೀ ಮಾಡಿದುಪಕೃತಿಯನು ನಾನು ಎಂಬಂತೆ. )

ಏನೆಂತ ಮರೆಯುವೆ ಎಲೆ ಮಾನವ ನೀ | ನಾನೆ ಶ್ರೇಷ್ಠನೆಂದು ಬರಿದೆ ಗರ್ವದಿಂ || ಪಲ್ಲ || ವಿರತಿಯಲಿ ಶುಕಮುನಿಯೆ ಭೋಗದಲಿ ಕೃಷ್ಣನೆ | ಕರುಣೆಯಲಿ ಬಲಿಂದ್ರ ನೀನೇನು ಪೇಳೊ || ಪರಮ ಜ್ಞಾನೈಶ್ವರ್ಯದಲಿ ಶಿದ್ಧಾರೂಢನೆ | ಸೈರಣೆಯ ಗುಣದಲಿ ವಸಿಷ್ಟನೆ ನೀನು || ೧ || ಶಿವಭಕ್ತ ಜಂಗಮರ ರಕ್ಷಣೆಯನುಮಾ | ಡುವದಕೆ ಗುಂಡ ಬ್ರಹ್ಮಯ್ಯನೆ ನೀನು || ಶಿವನಾಮ ನಿಷ್ಠೆಯಲಿ ಆರ್ಯಮನೆ ನೀನು | ಶಿವಧರ್ಮ ಬೋಧಕೆ ಕಲಿಗಣನಾಥನೆ || ೨ || ರಚಿಸುವವರಲಿ ಸೂತ್ರ ವ್ಯಾಸ ಭಗವಂತನೆ | ರಚಿಸುವವರಲಿ ಭಾಷ್ಯ ಶಂಕರಾಚಾರ್ಯನೆ || ರಚಿಸುವವರಲಿ ವಾರ್ತಿಕ ಸುರೇಶ್ವರನೆ | ರಚಿಸುವವ

ರಲಿ ಕವಿತೆ ನಿಜಗುಣಾರ್ಯನೆ || ೩ || ಸತ್ಯವಚನದಲಿ ಬಲಿಚಕ್ರ ವರ್ತಿಯು | ಭೃತ್ಯಭಾವದಲಿ ಮಾರುತಿಯು ನೀನು || ಸ್ತುತಿಯಗೊ ಳ್ಳುವರಲಿ ಜಗದೀಶನೆ ನೀ | ಯತಿಯಲಿ ಕುಂಭ ಸಂಭವನೊ ನೀನು || ೪ || ಯುಕ್ತಿಯೊಳಗೆ ನಾರದಮುನಿಯೊ ನೀನು | ಶಕ್ತಿಯೊಳಗೆ ಭೀಮಸೇನನೊ ನೀನು | ಭಕ್ತಿಯೊಳಗೆ ಬಸವೇಶ್ವರನೇನೊ ನೀ | ಮುಕ್ತಿಪಥದಲಿ ಗುರು ರಾಮಾರೂಢನೊ || ೫ ||

## ೨೩ ನೇ ಪದ.

( ದಾಟಿ—ಶ್ರೀಗುರುವಚನದಿಂದಧಿಕ ಸುಧೆಯುಂಟೆ ಎಂಬಂತೆ. )

ಜ್ಞಾನಿಗಳಪಂಥದಿಂ ಶ್ರೇಷ್ಠ ಪಂಥಮುಂಟೆ | ಮಾನವಂತರ ಸಂಗದಿಂದನ್ಯ ಸುಗುಣುಂಟೆ || ಪಲ್ಲ || ಮೋಹದಿಂದಲಿ ಬೇರೆ ದುರಿತಗುಣವುಂಟೆ | ಸಾಹಸದಿಂ ಸುಜನರ ಧರ್ಮಬೇರುಂಟೆ || ಕೋಹಮೆನಿಸ ಭ್ರಮೆಯಿಂದನ್ಯ ಭ್ರಮೆಯುಂಟೆ | ಸೋಹಮೆನಿಸ ಮಂತ್ರದಿಂದನ್ಯ ಮಂತ್ರುಂಟೆ || ೧ || ಲೌಕಿಕರ ಸಂಗದಿಂದನ್ಯ ಪಾಪಮುಂಟೆ | ಅಕಲಂಕಮತಿಯಿಂದ ಬೇರೆ ಸ್ವರ್ಗಮುಂಟೆ || ಆಕಲಂಕ ಜ್ಞಾನದಿಂದಧಿಕ ತಪಮುಂಟೆ | ಯುಕುತಿಯಿಂದಲಿ ಬೇರೆ ಶಕ್ತಿಯೆಂಬುವದುಂಟೆ || ೨ || ಸತ್ಯವೃತಾಳ್ವಂಗೆ ಮೃತ್ಯು-ಭೀತಿಯುಂಟೆ | ಮೃತ್ಯುರಹಿತ ಗುರುಶೇವೆಯಿಂಶೇವೆಮುಂಟೆ || ನಿತ್ಯಮೋದದ ಫಲದಿಂದಧಿಕ ಫಲಮುಂಟೆ | ನಿತ್ಯಸಾಧನೆಗಿಂತಧಿಕ ಸಾಧನುಂಟೆ || ೩ || ದುರುಳ ಪಿಸುಣನಿಂ ಬೇರೆ ಹೊಲೆಯನುಂಟೆ | ಧರಣಿಯೊಳನ್ನದಾನಕೆ ಸರಿಯೊಂದುಂಟೆ || ಹರನಭಕ್ತಿಗಿಂತಧಿಕ ಭಕ್ತಿಯುಂಟೆ | ಹರುಷತನಕೆ ಸರಿಯಾದ ಧನಮುಂಟೆ || ೪ || ಭಕ್ತಿಯಿಲ್ಲದವಂಗೆ ಭಾಗ್ಯ ದೊರೆಯುವದುಂಟೆ | ಮುಕ್ತಾಪೇಕ್ಷಿಲ್ಲದವಂಗೆ ಬೋಧಿಪುದುಂಟೆ || ಮುಕ್ತಿಯಿಲ್ಲದವಂಗೆ ಸುಖವಾಗುವದುಂಟೆ | ಮುಕ್ತಿದಾತಾ ರೂಢರಾಮ ನಿಂಬೇರುಂಟೆ || ೫ ||

## ೨೪ ನೇ ಪದ.

( ದಾಟಿ—ಕೇಳಿದಾಗಲಿ ಹೇಳಬಾರದು ಎಂಬಂತೆ. )

ಹಿತವು ಏನಿಗು ಮನುಜನಿನಗೆ | ಜಗದೊಳು ಭ್ರಂಶ || ಪಲ್ಲ || ಶ್ರುತಿನಿಚಯದ ಪಂಥಪಿಡಿಯದೆ | ಹಿತವಹಿತವನೋತು ತಿಳಿಯುದೆ | ಸತತ ಪುಸಿಸಂಸಾರಕೆಳಸಿ | ಮತಿಹೀನನೆನಿಸಿಕೊಂಬೊದು || ಅನುಪಲ್ಲ || ಚಿನುಮ... ಶ್ರೀಗುರುನಾಥನ | ಪಾದಪಂಕಜಂ | ಮನದೊಳು ಹರುಷದಿಂ ಸ್ಮರಿಸಿ || ತನುಮನಧನಗಳನರ್ಪಿಸಿ | ಅನವರತಿರ್ಪ ಸುಖವಬೇಡದೆ | ಕನಸಿಂದ್ರಜಾಲದಂತೆ ತೋರ್ಪ | ಹೊನು ಹೆಣ್ಣು ಮಣ್ಣಿಗೆ ಮೆಚ್ಚುವದು || ೧ || ಮದನಸ್ತ್ರೀಯಳು ವಿರಹಿ ಪುರುಷನ | ಹತ್ತಿರ ಸ...ತ | ಮುದದಿ ಮನಸನಿಡುವತೆರದಿ || ಸದಮಲ ಗುರುಬೋಧದಲ್ಲಿ | ಹೃದಯವಿಟ್ಟು ಮದವನಸಿಸದೆ | ಪುದಿದು ತೋರುವ ವಿಷಯನೆಚ್ಚಿ | ಅಧಮ ಯಮಬಾಧೆಗೆ ಸಿಲ್ಕುದು || ೨ || ಮೂರು ಸಂಶಯವನ್ನು ನೀಗದೆ | ಭರದಿಂದಸಾರಿ | ಪಾರಮಾರ್ಥದ ತಿರುಳುತಿಳಿಯದೆ || ಮಾರಹರ ಗುರು ರಾಮಾರೂಢನ | ಸಾರತರದಾನಂದ ಸವಿಯದೆ | ಘೋರರೂಪ ಸಂಸಾರದೊಳು ಸೇರಿ | ಧಾರುಣಿಯೊಳಗನರ್ಥ ಸಾಯುದು || ೩ ||

## ೨೫ ನೇ ಪದ.

( ದಾಟಿ—ಮಾಡಲಿಲ್ಲವೆ ತಪವ ಎಂಬಂತೆ )

ಹೊಲೆಯನಲ್ಲವೆ ಇವನು | ಹೊಲೆಯನಲ್ಲವೆ || ಬಲ್ಲಿದ ಜನರರಿದು ನೋಡಿರಿ | ಕ್ಷುಲ್ಲ ಗುಣದಿ ಮೆರೆಯುವವನು || ಪಲ್ಲ || ಪರಸ್ತ್ರೀಯರ ನಳುಪುವವನು | ಪರರ ಧನವ ಕದಿಯುವವನು || ನಿರತ ಮೋಸದಿ ಚರಿಸುವವನು | ಹರಣ ಘಾತಮಾಡುವವನು || ೧ || ಪ್ರಾಣಿಗಳಲಿ ದಯವಿಲ್ಲದೆ | ಮಾಣದವರ ಕಾಡುವವನು || ಜಾಣನೆನಿಸದೆ ಲೋಕದೊಳಗೆ | ಕೋಣನಂತೆ ತಿರುಗುವವನು || ೨ || ಪನಿಂದೆಯನಾಡುವವನು | ನಿರುತ ಪುಸಿಯ ನುಡಿಯುವವನು || ಪ

ರುತ್ಕರ್ಷವನು ನೋಡಿ ಮರಗುವವನು ಮನಸಿನಲ್ಲಿ || ೩ || ಅಲ್ಪ ಮಾತಿಗೆ ಕ್ರೂರತನದಿ | ಕಲಹವನ್ನು ಮಾಡುವವನು || ಮಲಮೂ ರರಿಂ ಪುಟ್ಟಿದಂಥ | ಹೊಲೆತನುವಾನೆಂಬವನು || ೪ || ಶೃತಿಮತವ ತ್ಯಜಿಸಿ ಅನ್ಯ | ಮತವ ನೋತು ಪಿಡಿಯುವವನು || ಸತತ ಪರಮಾ ರೂಢ ರಾಮನ | ನುತಿಸದವನು ಲೋಕದೊಳಗೆ || ೫ ||

## ೨೬ ನೇ ಪದ.

( ದಾಟಿ— ಶ್ರೀಗುರು ಶಿವನೆ ಕರುಣದಿಂದಲೆನಗೆ ಎಂಬಂತೆ )

ಜರಗಿಸೊ ಮನುಜ ನೀನಿಂಥ ಕಾರ್ಯವನು | ನಿರುತ ಜಗ ದೊಳು ದುರ್ಗುಣಗಳನಳಿದು || ಪಲ್ಲ || ಕರದಿಂದ ಗುರುಶೇವೆ ದಾನ ಧರ್ಮವನು | ವರತೀರ್ಥ ಯಾತ್ರೆಯನು ಪಾದಗಳಿಂದಲಿ || ವರವೇ ದಾದಿಗಳ ಶ್ರವಣ ಶ್ರೋತ್ರದಿಂದ | ಹರನಾಮ ನುಡಿಯುವದನು ರಸನೆಯಿಂದ || ೧ || ಮನಸಿನಿಂದಲಿ ಭಕ್ತಿ ಮನೀಷೆಯಿಂದಲಿ | ಆನ ಘವಿನುತ ಚರ್ಚೆ ಮಾಡುವದನು ನೀ || ತನುವಿನಿಂದಲಿ ಜಗದೀಶ ನರ್ಚನೆಯನು | ಅನವರತ ಸ್ನಾನ ಸಂಧ್ಯಾದಿ ಕರ್ಮವನು || ೨ || ನೀನು ಮಾಡಿದ ಕರ್ಮ ನಿನಗೆ ಕಟ್ಟಿದ ಬುತ್ತಿ | ಹೀನಕರ್ಮವ ಮಾ ಡಲನರ್ಥನೀ ಸತ್ತಿ || ಹೀನಕರ್ಮಗಳಳಿದು ಸುಕರ್ಮವನು ಕೊಂ ದಿ | ಮಾನವಂತಾರೂಢ ರಾಮನ ಪೊಂದು || ೩ ||

## ೨೭ ನೇ ಪದ.

( ದಾಟಿ—ಕರುಣಿಸೊ ಪ್ರಿಯಾ ಎಂಬಂತೆ )

ಕೊಡಬೇಡೊ ದೇವಾ ನಾಡದೊಳಗೆ ಮೂಢರ ಸಂಗ ||ಪಲ್ಲ|| ಮೃಡನೆ ನಿನ್ನಯ ನಾಮ ನೆನೆಯ | ದವನ ಸಂಗ || ಅನುಪಲ್ಲ || ತರುಣಿ ಪುತ್ರ ಧನಕಾಶೆ | ಮಾಡುವನ ಸಂಗ || ನಿರಸವಾಣಿ ಪರರಿ ಗೆ ಕೇಡು | ಬಯಸುವನ ಸಂಗ || ೧ || ಕುಳಿತೋಲಗದೊಳಗೆ ಕುಹ ಕ | ಮಾಡುವನ ಸಂಗ | ಇಳೆಯೊಳಗೆ ಶ್ರೇಷ್ಠನೆನಿಸ | ದವನ ಸಂಗ || ೨ || ಗುರು ಹಿರಿಯರನು ನೆರೆ | ನಿಂದಿಪನ ಸಂಗ || ವರ ವೇದ

ಮಹಿಮೆಯರಿಯು | ದವನ ಸಂಗ || ೩ || ಮುಂದೆ ಸ್ತುತಿಸಿ ಹಿಂದೆ ನಿಂದಿ | ಸುವವನ ಸಂಗ || ಅಂದವಲ್ಲದ ರಾಗ ದ್ವೇಷ | ಮಾಡುವ ವನ ಸಂಗ || ೪ || ಬ್ರಹ್ಮಜ್ಞಾನವರಿಯುದ ಮ | ನುಜನ ಸಂಗ || ಬ್ರಹ್ಮಮೂರುತಿ ರಾಮಾರೂಢನಿ | ನಿಂಥವರ ಸಂಗ || ೫ ||

೨೮ ನೇ ಪದ.

( ದಾಟಿ- -ಸಂಚೀತ ಮಾಷೀ ಬ್ರಹ್ಮ ಯಾನೆ ಎಂಬಂತೆ )

ಪಾಲಿಸೆನಗೆ ನೀಲಕಂದರ | ಇಂಥ ವರವನೆ ||ಪಲ್ಲ|| ಶೂಲ ಪಾಣಿ ಎಲ್ಲ ವಿಷಯು | ದಲ್ಲಿ ವೈರಾಗ್ಯ || ಅನುಪಲ್ಲ || ನಾಡದೊಳಗೆ ಜನರೆಲ್ಲರು | ಕಾಡುವಂಥಾದ್ದೆ || ಖೋಡಿ ಮೂಢನೆಂದು ಎನಗೆ | ತಾಡಿಸುವಂಥಾದ್ದೆ || ೧ || ಭೋಗವೆನ್ನಯು ಪೋಗಿ ಪುನಃ | ಯೋ ಗಾನಂದದೊಳು || ಜಾಗರಣದಿಂದೆನ್ನ ಮನವು | ನಿಲ್ಲುವಂಥಾದ್ದೆ || ೨ || ಕಡಗ ಕಂಕಣ ಕೊಡಬೇಡಾ | ಬಡಿವಾರ ಬೇಡಾ || ಮೃಡ ನೆ ನಿನ್ನಯ ಅಡಿಗಳಲಿ | ವಾಸಮಾಡುವದೆ || ೩ || ಫಾಲನೇತ್ರ ಫ ಣಿಪ ಸೂತ್ರ | ಪುಣ್ಯ ಗಾತ್ರನೆ || ಕಾಲ ಕಾಲನೆ ಜನರೆನಗೆ | ಹಳಿ ಯುವಂಥಾದ್ದೆ || ೪ || ಸರ್ವ ಸಗುಣ ಪರಿಪಾಲ | ಸುರರ ಜಾಲ || ಸರ್ವ ಲೋಕದಾದಿ ಮೂಲ | ಶರಣರ ಲೋಲ || ೫ || ಭಕ್ತ ಜನರ ಸುರ ಭೂಜ | ಸಕಲ ರಾಜ | ಮುಕ್ತಜನರೋತ್ತರ ಸಂಗ | ಮನಸಿ ಜ ಭಂಗ || ೬ || ಪಾಶನಾಶನೆ ಕ್ಲೇಶಘಾಶನೆ | ಲೋಕಕೀಶನೆ || ಈಶಾರೂಢ ರಾಮನ ದಾಸ | ದಾಸನಾಗುವದೆ || ೭ ||

೨೯ ನೇ ಪದ.

( ದಾಟಿ—ಲಿಂಗ ಪೂಜೆಯ ಮಾಡಿರೋ ಎಂಬಂತೆ )

ಮಂಗಳಾರುತಿ ಬೆಳಗಿರೋ | ಪರಬ್ರಹ್ಮ ಮೂರ್ತಿಗೆ || ಮಂಗ ಲದಾಯಕನೆಂದು ನೀವು ಭರದಿ || ಪುಂಗ ದೃಷ್ಟಿಗೆ ಸಂಗರಹಿತವನ್ನೆ ಮಾಡಿ || ಪಲ್ಲ || ಸರ್ವ ರೂಪವು ತಾನಾಗಿ | ಮತ್ತದರೊಳು | ಸರ್ವಕೆ ಸಾಕ್ಷಿಯಾಗಿ || ಸರ್ವಕಾರ್ಯವನು ಮಾಡಿ ಮಾಡದವಗೆ | ಸರ್ವ ದಾತಗೆ ಪರಮ ಭಕ್ತಸುರ ಭೂಜಗೆ || ೧ || ಸುರ ನರ ಮಂ

ದ್ಯನಿಗೆ | ಧರಿಯೊಳಗೆ | ಪರಮನೆನಿಸಿದವಗೆ || ನಿರುತ ಯೋಗಾನಂದದಲಿ ಬೆರೆದವಗೆ | ಸರಸ ಬೋಧಾಮೃತ ಸುಖವ ಸವಿಯುವಗೆ || ೨ || ವರ ಮುನಿನುತಿ ಪಾತ್ರಗೆ | ಕರುಣಸಾಗರ | ವರ ಜ್ಞಾನಮಯ ಗಾತ್ರಗೆ || ಸ್ಮರಹರ ಭವಹರ ಭಯಹರ ಪರಮಗೆ | ಪುರಹರ ಪರತರ ಸುಖಕರ ಮೂರ್ತಿಗೆ || ೩ || ದುರಿತ ಕರ್ಮಭಂಗಗೆ | ಗಿರಿಜವರಗೆ | ವರವೇದ ವಿಧಿ ಭಂಗಗೆ || ವರ ಯೋಗಿ ಸಂಗಗೆ | ದೇವರ ದೇವನಿಗೆ | ಪರಮಾತ್ಮ ಜೀವಾತ್ಮರೈಕ್ಯ ಭಾವನಿಗೆ || ೪ || ಸಂಚಿತಾಗಾಮಿ ಕರ್ಮ | ನಾಶನಿಗೆ | ಪಂಚಕೋಶಾತೀತನಿಗೆ || ಮಿಂಚು ಕನಸಿನಂತೆ ಜಗವನು ಕಂಡವಗೆ | ಪಂಚಲಕ್ಷಣದಿಂದ ಮೆರೆವಾ ರೂಢ ರಾಮುಗೆ || ೫ ||

## ೩೦ ನೇ ಪದ.

( ದಾಟಿ—ಗುರುದೇವ ನಿಮ್ಮಯ ಘನಮಹಿಮೆಯ ನರಿಯವೆ ಎಂಬಂತೆ )

ಮುಕ್ತಿನಾರುತಿ ಎತ್ತಿ ಮಹಿಮಾರೂಢಗೆ ನಾ ಬಹು ಧನ್ಯನಾಗುವೆ ||ಪ|| ಸತ್ಯರಹಿತನಿಗೆ ಮೃತ್ಯುನಶಿಸಿದಗೆ ನಿತ್ಯಾನಂದನಿಗೆ || ಭೃತ್ಯನಾಗಿ ನಾ ಸತತ ನಿತ್ಯ ಮುಕ್ತನಿಗೆತ್ತಿ || ೧ || ಭಾಗ್ಯಶರಧಿಗೆ ತ್ವರಭೋಗ ತ್ಯಜಿಸಿ ಸ | ದ್ಯೋಗಾನಂದದಲಿ ಜಾಗರಾದನಿಗೆ || ಬೇಗದಿಂದಲಿ ನಾನು ನಿಗಮ ವೇದ್ಯನಿಗೆತ್ತಿ || ೨ || ಕರುಣಾನಿಧಿಗೆ ಖರ | ಶರಣ ಸ್ತೋಮನಿಗಾ | ದರ ಬೋಧನಿಗೆ ತ್ರಿಪುರ ಹರನಿಗೆ || ಪರವವಿಲ್ಲದೆ ನಾನು ಮಂವೆ ರಹಿತನಿಗೆತ್ತಿ || ೩ || ಪರಮ ತೇಜಗೆ ಪರತರ ಪ್ರಕಾಶ ಮಾ | ದರುವಿನೋಳ್ಮೆರೆದ ಕರುಣ ರೂಪನಿಗೆ || ಶರಣಾಗತನಾಗಿ ನಾ ಸುರರಿಂ ವಂದ್ಯನಿಗೆತ್ತಿ || ೪ || ಸೋಮ ಧರಿಸಿ

ದಗೆ ಕಾಮ ನಾಶಗೆ ಸುಖ | ಧಾಮ ನಿಧಿಯ ಸಾದ್ಯೋಮಾತೀತನಿಗೆ || ಪ್ರೇಮದಿಂದಲಿ ನಾನು ರಾಮಾರೂಢರಿಗೆತ್ತಿ || ೫ ||

ಶ್ರೀಮತ್ಸಚ್ಚಿದಾನಂದ ಸಂಯಮಿ ಶಿಖಾಮಣಿ ಶ್ರೀಯುತ
ಪರಮಹಂಸ ಸದ್ಗುರು ರಾಮಾರೂಢರ ಪೂಜ್ಯಪಾದ
ಶಿಷ್ಯಶ್ರೀಗುರು ಸಂಗಮೇಶ್ವರ ಕವಿಗಳಿಂದ
ಮುಮುಕ್ಷು ಜನಹಿತಾರ್ಥವಾಗಿ ವಿರಚಿಸಲ್ಪಟ್ಟ
ಕೈವಲ್ಯ ಪದ್ಧತಿಯೊಳು ನೀತಿ ಕ್ರಿಯಾಚಾರಸ್ಥಲ
ಸಮಾಪ್ತವಾದುದು.

---



ಶ್ರೀಮತ್ಸದ್ಗುರು ರಾಮಾರೂಢಾಯನಮಃ

# ಯೋಗಪ್ರತಿಪಾದನ ಸ್ಥಲ ಪ್ರಾರಂಭ.



## ೧ ನೇ ಪದ.

( ದಾಟಿ—ಶ್ರೀಗುರು ಶಿವನೆ ಕರುಣದಿಂದಲೆನಗೆ ಎಂಬಂತೆ )

ಶ್ರೀಗುರು ಕರುಣವ ನಾನೆಷ್ಟು ವರ್ಣಿಸಲಿ | ಯೋಗಸ್ಥಲಗಳ ಮರ್ಮಪೇಳಿ ಸಲುಹಿದಾ || ಪ || ಯೋಗ ಪಂಚಕದ ಮರ್ಮವ ನೆರೆತಿಳಿಸಿ | ಭೋಗವಂಚನೆಯ ನೋರಂತೆ ಪರಿಹರಿಸಿ || ಆಗಮ ನಿಗಮ ಸಾರವ ನೆರೆ ಸೂಚಿಸಿ | ಜಾಗರಣವಮಾಡಿದೆನ್ನನರುವಿನೊಳ್ || ೧ || ಆರುಸ್ಥಲಗಳಿಂಗಿತವ ತವೆ ಪೇಳಿ | ಆರು ಭ್ರಮೆಗಳ ತ್ವರದಿಂದ ಸೀಳಿ || ತಾರಕತ್ರಯವನು ಸುಗಮದಿಂದಲರುಹಿ | ಪಾರಮಾರ್ಥದೊಳಗೆನ್ನ ನಿಲ್ಲಿಸಿದಾ || ೨ || ಇಷ್ಟಾದಿ ಲಿಂಗದಾಚರ ನೆಯು ವಿಧಿಯುಲಿ | ನಿಷ್ಠೆಯ ನಿಡಿಸಷ್ಟಮದಗಳ ಕಳೆದಾ || ಅಷ್ಟಾವರಣವೆ ಎನ್ನ ಪ್ರಾಣವಾಗುಳಿಸಿ | ಅಷ್ಟಪಾಶವನುರೆ ಪರಿಹರಿಸಿದಾ ||೩|| ಸಗುಣ ನಿರ್ಗುಣವೆಂಬಷ್ಟಾಂಗ ಯೋಗವನು | ಮಿಗೆ ತಿಳಿಸಿ ಎನ ಭವಮಾಲೆ ಹರಿದಾ || ಅಗಣಿತ ದಿನಕರಾದಿಗಳ ತೇಜಕ್ಕಿಂತ | ಮಿಗಿಲೆನಿಸುವ ಬ್ರಹ್ಮತೇಜವ ತೋರಿದಾ || ೪ || ಜೀವಶಿವೈಕ್ಯವ ಧೃಡವಾಗಿ ನಿಲ್ಲಿಸಿ | ಪಾವನಾತ್ಮಕ ಶ್ರೀರಾಮಾರೂಢರ ಮೋದ || ತೀವಿ ಮನದೊಳಗಭಯ ಹಸ್ತವನಿಟ್ಟು | ದೇವರ ದೇವ ನೀನೆಂದು ಬೋಧಿಸಿದಾ || ೫ ||

## ೨ ನೇ ಪದ.

( ದಾಟಿ—ಪಡೆವೆ ನೀನೆಂದಿಗೆ ಎಂಬಂತೆ. )

ಯೋಗಿಯಾಗೊ ಮನುಜ ಜಗದೊಳಗೆ ನೀನು | ಭೋಗವೆಲ್ಲವನಳಿದು ಯೋಗಲಕ್ಷಣದಳಿದು || ಪ || ಆಧಾರವೆ ಮೊದಲಾಗಿ

ಆಗ್ನೆಯಕಡೆ | ಯಾದಾರು ಚಕ್ರವನತಿ ಕ್ರಮಿಸಿಮತ್ತೆ || ಸಾದರದಿಂ ದಲೀಡಾ ಪಿಂಗಳ ಸುಷು | ಮ್ನಾದಿಯೊಳು ಸೇರಿ ಅಲ್ಲಿ ಅಮೃತ ಸವಿದು || ೧ || ಭ್ರೂಮಧ್ಯಸ್ಥಾನದೋಳ್ ತೋರುತಿಹ ತೇಜ | ಸೋಮ ಸೂರ್ಯ ಶಿಖಿತಾರಕ ಜಾಲಹವಳ || ಕಾಮನಬಿಲ್ಲು ಸೊಡರು ರತ್ನ ಮಾಣಿಕ ಮಿಂಚು | ಹೇಮದಂತೆ ತೋರ್ಪ ಬಿಂದುವನೆ ಕಂಡು || ೨ || ನಿರ್ಜನ ಪ್ರದೇಶದಲ್ಲಾಸನಹಾಕಿ | ಶರಧಿ ಭೇರಿ ಘಂಟೆ ಮೃದಂಗ ಶಂಖ || ಮುರಜಿ ಮೇಘ ತಾಳ ವೇಣು ಭ್ರಮರಾದಿ | ಪರಿಪರಿ ಅನಾಹತನಾದವನೆ ಕೇಳಿ || ೩ || ಚರಿಸ್ಯಾಡುವಿಂದ್ರಿಯ ನಿಕರವ ಬಂಧಿಸಿ| ಅರಿಗಳೆಂಬ ಕಾಮಕ್ರೋಧಾದಿಗಳ ತ್ಯಜಿಸಿ|| ವರ ಸಿದ್ಧಾಸನವ ಹಾಕಿ ಕಾಮನ ವೊಳಿಕಿ| ನೆರೆದಹುಸಿ ಬೇಗದಿಂದಲಿ ನೀ ಪರಮ|| ೪ || ಜೀವ ಬ್ರಹ್ಮೈಕ್ಯ ಭಾವವನು ದಳೆದು | ದೇವರದೇವ ಶ್ರೀ ಗುರು ರಾಮಾರೂಢರ || ಪಾವನಾತ್ಮಕವಾದ ಸಾದರದಿಂದೆ ನೀ| ನೋವಿ ಪೊಂದಿಕೊಂಡು ಪರಮ ಪವಿತ್ರ || ೫ ||

## ೩ ನೇ ಪದ.

( ದಾಟಿ—ಗುರುವರನ ನಿನಗಿಂತ ಎಂಬಂತೆ. )

ಯೋಗಕಧಿಕಾರಿಗಳು ಐ[illegible]ಟವರ | ನೀಗಲೆ ಪೇಳುವೆ ಕೇಳು ನೀ ಮನುಜ || ಪ || ಅಲ್ಪಶಕ್ತಿ ಕುಟುಂಬಧಾರಿ ಪರಾಧಿ | ಅಲ್ಪಜ್ಞಾನ ಭೋಗ ರೋಗಶಿ[illegible]ನಾಗಿ || ಅಲ್ಪದ್ಯೋಗಾಭ್ಯಾಯೆಮೃದುವವನು | ಉಲ್ಹಾಸ ಮಂತ್ರಯೋಗಕಧಿಕಾರಿಯು || ೧ ಹರುಷ ಖೇದಗಳಲಿ ಸಮಬುದ್ಧಿಯುಳ್ಳವನು | ಶರಣರ ಸಂಗ ಕೃತ್ಯ ಸಾಕ್ಷಿಕನು | ಕರಣೇಂದ್ರಿಯ ವೃತ್ತಿ ಶಾಂತನವನು ಮ[illegible] ಉರೆಅಧಿಕಾರವು ಲಯಯೋಗಕವನಿಗೆ || ೨ || ನಿತ್ಯ ಶಮದಮ ಸದ್ಗುಣ ಸಂಪನ್ನನು | ಸತ್ಯ ಶೌಚಾದಿ ಸಿದ್ಧ ಧೈರ್ಯವಂತ ಹಿತವುಳ್ಳಾತನೆ ಯೋಗಾಭ್ಯಾಸದೊಳವನು | ಅತಿ ಮಾತ್ರನೆ ಹಠಯೋಗಾಧಿಕಾರಿ || ೩ || ಸಕಲಶಾಸ್ತ್ರ ಪ್ರವೀಣ ನಿರ್ವ್ಯಾ[illegible]

ಸಕಲ ಭೋಗರಹಿತ ನಿರ್ವಿಕಾರಿ || ಶಕುತಿಯುಳ್ಳಾತನತಿ ಮಾತ್ರಶರನು | ಅಕಲಂಕ ರಾಜಯೋಗಕಧಿಕಾರಿ || ೪ || ಅವಿರತಮಾಲಕ್ಷ್ಯ ತಂಹರನು ಸುಕ್ಷೇಮಿ | ಪವಿತ್ರ ಮತಿವಂತನು ತ್ರಿಕರಣ ಶುದ್ಧನು || ಅವಿಚಲ ರಾಮಾರೂಢರ ಪದಭಕ್ತನು | ಶಿವಯೋಗಕಧಿಕಾರಿ ಯೆಂದೆನಿಸುವನವನು || ೫ ||

೪ ನೇ ಪದ.

( ದಾಟಿ—ಶ್ರೀಗುರು ಕರುಣವ ಎಂಬಂತೆ. )

ಜಪಿಸೆಲೊ ಮನುಜನೆ ದೇಹದೊಳಗಿರುವ | ಉಪಮಾವಿಾರಿದ ಮಹಾಮಂತ್ರಗಳನು ನೀ || ಪ || ಭುವರ್ಲೋಕ ಮಹರ್ಲೋಕ ಜನರ್ಲೋಕ ಭೂಲೋಕ | ಸುವರ್ಲೋಕ ತಪೋಲೋಕ ಸತ್ಯಲೋಕಗಳ || ಪವಿತ್ರ ವೇದಾದಿಗಳತಲಾದಿ ಲೋಕಗಳ | ತವೆ ಗರ್ಭಿಸಿಕೊಂಡೇಕಾಕ್ಷರಮನುವನು || ೧ || ಶರೀರದೋಳಾಧಾರ ಚಕ್ರ ಮೊದಲಾಗಿ | ವರಾಗ್ನೆಯ ಚಕ್ರ ಸರಸಿಜವಾರರ || ಕರಣಿಕೆಗಳೊಳಗೆ ಮಿಸುಪ ನಕಾರಾದಿ | ಪರತರ ಷಡಾಕ್ಷರಿ ಮಂತ್ರವನ್ನು || ೨ || ಗಂಗೆಯಮುನೆ ಎಂಬ ನದಿಯುಲಿ ಚರಿಸುವ | ಪುಂಗ ಹಂಸವೆಂಬ ಸೋಹಂಮಂತ್ರವನು || ಸಂಗ ರಹಿತಮಾಡಿ ಚನ್ನಾಗಿ ಸ್ಮರಿಸಿ ನೀ | ಮಂಗಲಾತ್ಮಕ ಗುರು ರಾಮಾರೂಢರ ಪೊಂದು || ೩ ||

೫ ನೇ ಪದ

( ದಾಟಿ—ಲಿಂಗಪೂಜೆಯ ಮಾಡಿರೊ ಎಂಬಂತೆ )

ನೋಡುನೋಡೆಲೊ ಮನುಜ | ಪರಮಾತ್ಮನ | ನೋಡುನೋಡೊಲೊ ಮನುಜ || ನಾಡೆ ಸದ್ಗುಣಗಳ ಸಂಗವನನುದಿನ | ಮಾಡಿ ರೂಢಿಯೊಳಗೆ ಸುಜ್ಞಾನ ದೃಷ್ಟಿಯಲಿ || ಪ || ಆರೆರಡು ಮದಗಳ್ಪೋಗಿ | ನಿರ್ವಿಷಯನಾಗಿ | ಮೂರುವಾಸನೆಯ ನೀಗಿ || ಸಾರತರಮಾದ ತ್ರಿಕೂಟ ಸ್ಥಾನದೊಳು | ಸೇರಿ ಧೃಢತರಮಾಗಿ ಅಕ್ಷಿದೃಷ್ಟಿಯನಿಟ್ಟು || ೧ || ಮೂರು ಕರಣದ ಕಲುಷ | ವನುಱಿದು

ಧೀರ ಗುಣಗಳನು ಬಿರಿದು || ಪಾರಮಾರ್ಥವೇದಾಂತದೊಳು ನಂಬಿ ಗಿಟ್ಟು || ಸಾರತರ ವಿಚಾರದೊಳೊಳ ಪೊಕ್ಕು || ೨ || ವರಇಂದರ್ಕ ಮಾರ್ಗವ | ಬಂಧಿಸಿ ಶಿರದ | ಲ್ಲಿರುವಜರಂಧ್ರವನೇರಿ || ತ್ವರದಿ ಪ ಶ್ಚಿಮ ದಿಶೆಯೊಳಗೆ ವಿರಾಜಿಸುವ || ಪರಮ ಮೋಕ್ಷಾಂಗನೆಯನು ಕೂಡಿ ಮೋದದಿ || ೩ || ಜೀವ ಈಶ್ವರರ ವಾಚ್ಯ | ಭಾಗವನು | ಓ ವಿತ್ಯಜಿಸಿ ನೀನು || ಜೀವ ಈಶ್ವರರ ಲಕ್ಷ್ಯ ಭಾಗವನೆಂಬಿ | ಪಾವ ಕಾತ್ಮಕ ಸಚ್ಚಿದಾನಂದರೂಪನ || ೪ || ಮೋಹ ಮತ್ಸರಗಳನು | ಕಳೆಯುತಲಿ | ಕೋಹಂ ಭಾವನೆಯು ನೀಗಿ || ಮೋಹಾಮೋಹ ವಿಲ್ಲದಾರೂಢ ರಾಮನೆ | ಸೋಹಮೆನುತ ನಿಜಬ್ರಹ್ಮವ ನೀನೋಡೊ || ೫ ||

## ೬ ನೇ ಪದ.

( ದಾಟಿ—ಏನುಪಾಯವು ಮಾಡಲಿ ಎಂಬಂತೆ. )

ವರಯೋಗಿಯನೆ ಮಾಡೆನ್ನ | ಧಾರುಣಿಯೊಳಗೆ | ನಿರುತ ವಿ ರತಿಯ ಪಾಲಿಸಿ || ದುರಿತ ನಿರಹರಣ ತ್ವರಿತ ಸುಖಕರಣ | ವರಯೋ ಗಿ ಜನಕರುಣ | ನಿರುತ ಶೇಷಾಭರಣ || ಪಲ್ಲ || ಕಂಗಳ ಮಧ್ಯ ದೊಳಿರ್ಪ | ಕೋಟಿಅರ್ಕ ತೇಜ | ಹಿಂಗದೆ ಕಾಣಿಸೆನಗೆ || ತುಂಗ ಜ ನರಸಂಗ ಮಂಗಮನವ ಭಂಗ | ಸಂಗರಹಿತ ತುಂಗ ಜ್ಞಾನಮಯ ಪುಂಗ || ೧ || ಮೂರೈದು ಮದಗಳಳಿಸಿ | ಧರದಿ ಆರಿಗ | ಳಾರನು ನೆರೆಪರಿಹರಿಸಿ | ಭೂರಿ ಸಕ್ತ ಮದಕ್ಷ ಘೋರ ಗರಳ ಭಕ್ಷ | ಪಾರ ಮಾರ್ಥದ ಪಕ್ಷ ಸಾರ ಸದ್ಗುಣರಕ್ಷ || ೨ || ವಿರಿದುನ್ಮನಿ ಸ್ಥಾನ ದೋ | ಳ್ಸೇರಿಸೆನ್ನ | ಸಾರಸಾಮೃತವ ಕುಡಿಸಿ || ಮಾರಹರ ತ್ರಿಪುರ ಹರ ನರಹರಿ ಹರ | ಘೋರಸಂಸಾರ ಹರ ಭದ್ರಸುರವರ ಕರ || ೩ || ಭವ ಭಯ ವನು ನಾಶಿಸಿ | ತವಕದಿಂದ | ಶಿವ ಷಂಚಾಕ್ಷರಿ ನುಡಿಸಿ || ಪವಿತ್ರ ಜ್ಞಾನಗಾತ್ರ ಶರಣ ಕುಲಗೋತ್ರ | ತವೆ ಭಕ್ತಮತಿಪಾತ್ರ ಫ ಣಿಪತಿ ಸೂತ್ರ || ೪ || ಮೇಲೆನಿಸಿದ ಬ್ರಹ್ಮಾನಂದಪನೋರಂತೆ |

ಪಾಲಿಸಿ ವಿಷಯ ಜರಿಸಿ|| ಶೂಲಪಾಣಿ ನಾಮ ಮೇಲಭಕ್ತರ ಸ್ತೋಮ | ನೀಲಲೋಚನ ನೇಮ ಪರಮಾರೂಢ ರಾಮ || ೫ ||

೭ ನೇ ಪದ.

( ದಾಟಿ—ದುರಿತಸಂಹಾರವ ಪರಿಹರಿಸುವದಕೆ ಎಂಬಂತೆ. )

ಎಂತು ದೊರೆಯುವದು ಮೋಕ್ಷಾಂಗನಿ ಸುಖವು | ಚಿಂತಿಸಿ ಹುನದೊಳು ಕೂಡದೆ ಸಾಧನವ || ಪ||ಶರಣರ ಸ್ನೇಹವ ಪ್ರೇಮೋಳ್ಯೋಳ್ಮಾಡದೆ | ವರವೇದಾದಿಯೊಳು ನಂಬುಗೆಯ ನಿಡದೆ || ಭರದಿ ಸಾರಾಸಾರ ಪದಾರ್ಥ ವಿವರಿಸದೆ | ವರಪದಾರ್ಥವಿದೆಂದು ಪಿಡಿಯದೆ || ೧ || ಆಸನವ ಹಾಕದೆ ವಾಸನೆಯ ನೀಗದೆ | ವಾಸುಕಿಧರನನ್ನು ತೋಷದಿ ನೆನೆಯದೆ || ಸೂಸಿ ದೇಹದೊಳಗೆ ಅಸುವ ಪೂರಕದಿಂದ | ಈಶ ಪರಮಾತ್ಮನ ಚಿನ್ಹವನೋಡದೆ || ೨ || ಶರೀರದೊಳಗೆ ಶೇರಿ ನೋಡಿ ಅಲ್ಲಿರುವ | ಸರಸಿಜಗಳಲಿ ಹರುಷವಿ ವಿಹರಿಸದೆ || ಅರಿಷಡ್ವರ್ಗಗಳನು ಬಿಡದೆ ಪರಮ | ಪರತರಾ ಜಿಂಹಕತತ್ವಾದಿಗಳ ಕೂಡದೆ || ೩|| ಅಮಳವಲ್ಲದ ತನುಭಾವನೆ ಯನಳಿಯದೆ |ಯಮಭಟರ ಹಾವಳಿಯನು ನೀಗದೆ|| ಸಮರಸವನು ಪಡೆಯದೆ ಲಿಂಗಾಂಗದೊಳು | ಯಮಾದಿ ನಿರ್ಗುಣಾಷ್ಟಾಂಗವ ದಳಿಯದೆ|| ೪ || ವರಜಾಗ್ರದಾದಿ ನಾಲ್ಕೆನಿಪವಸ್ಥೆಯೊಳ್ | ಮರೆಯದೆ ಹರುಷದಿಂದವುಗಳನರಿದು || ಪರಮಾರೂಢ ರಾಮನ ವಾಚ್ಯನೆಂದರಿದು | ಪರಾತರ ದೃಶ್ಯಯೊಳಡಗದೆ ವ್ಯರ್ಥ || ೫ ||

೮ ನೆ ಪದ.

( ದಾಟಿ—ಜ್ಞಾನಿಗಳ ಪಂಥದಿಂದನ್ಯ ಪಂಥಮುಂಟೆ ಎಂಬಂತೆ. )

ಎಲ್ಲವಸ್ತುವನು ತಮ್ಮ ಕಾರಣದೊಳು || ಒಳ್ಳೆಹಂಚಿಕೆಯಿಂದ ಲಯಮಾಡಿಮಗುಳೆ || ಉಳಿದ ವಸ್ತುವೆ ತಾನೆಂದು ನಂಬಿದವ | ನಿಳೆಯೊಳಗೆ ಮುಕ್ತನೆನಿಸುವನವನು || ಪಲ್ಲ || ಸಮಷ್ಟಿ ವಿರಾಟ ವೆಷ್ಟಿ ವಿಶ್ವಕಾರ | ಸಮಷ್ಟಿ ಹಿರಣ್ಯಗರ್ಭ ತೈಜಸ | ಅಮಳುಕಾರ ಮಾತ್ರೆಯೊಳು ಲಯಮಾಡಿ ಆ|ಸಮಷ್ಟಿ ಹಿರಣ್ಯಗರ್ಭ ತೈಜಸುಕಾರ || ಸಮಷ್ಟಿ ಈಶ್ವರ ಪ್ರಾಜ್ಞ ಮಕಾರದೊಳು| ಸಮಷ್ಟಿ ಹಿರಣ್ಯಗರ್ಭಾದಿ

ಲಯಮಾಡಿ | ಸಮಷ್ಟಿ ಈಶ್ವರ ಪ್ರಾಜ್ಞ ಮಕಾರವನು | ಅವುಳ ಸಾ
ಕ್ಷಿತುರ್ಯ ಓಂಕಾರದೊಳು ಲಯಿಸಿ || ೧ || ಧಾರುಣಿಯನು ವಾರಿ
ಣಿಯೊಳಗೆ ಲಯಿಸಿ | ವಾರಿಯನು ತೇಜದೊಳಗೆ ಲಯಿಸಿ || ವಾರಿ
ಣಿ ತೇಜಕ್ಕಿಂತ ದಶಗುಣಧಿಕವಾದ || ಸಾರ ರಹಿತ ನಲದಲಿ ತೇಜವ
ಲಯಿಸಿ || ಆ ರೂಪರಹಿತ ವಾಯುವನಾಕಾಶದೊ | ಳೋರಂತೆ ಲ
ಯಮಾಡಿ ಮರಳಿ ಆಕಾಶವನು | ಸಾರಿ ಅಜ್ಞಾನದೊಳಗೆ ಲಯಿಸಿ
ಅದನು | ಪಾರಮಾರ್ಥ ಚೇತನದೊಳು ಲಯಿಸಿ || ೨ || ಇದರಂತೆ
ಸಕಲರೂಪವನು ನಾಮದೊಳು | ಐದೆ ಲಯಮಾಡಿ ನಾಮವನು
ಓಂಕಾ | ರದಲಿ ಲಯಮಾಡಿ ಓಂಕಾರವನು ಮತ್ತೆ | ಸದಮಳ ಬ್ರ
ಹ್ಮಸ್ವರೂಪದೊಳು ಲಯಮಾಡಿ || ಪುದಿದು ತೋರುವ ಸರ್ವಕಾ
ರ್ಯ ವಸ್ತುವನು | ವಿದದಿ ಕಾರಣದೊಳು ಲಯಮಾಡಿ ಮೇಣು |
ಳಿದ ಮೇಲೆಂದೆಂದಳಿಯದಾರೂಢ ರಾಮನ | ಸದಮಲಾನಂದವನು
ದಳೆದವನೆ ಮುಕ್ತಾ || ೩ ||

೯ ನೇ ಪದ.

( ದಾಟಿ—ಅಹಾ ಏನು ಕೌತುಕವಿದು ಕಾಮನೊಡನಾಟ ಎಂಬಂತೆ. )

ಅಷ್ಟಾಂಗಯೋಗದೊಳಗಿನ ಯಮದಶ | ಇಷ್ಟಗುಣಗಳನರಿ
ದು ನಡೆವನೆಯೋಗಿ || ಪ || ಶರೀರ ವಾಣಿ ಮನ ನಿಜಯದಿಂದೊ
ಮ್ಮೆ | ಪರರಿಗೆ ಕಷ್ಟ ಕೊಡದಿರುವದಹಿಂಸೆಯು || ನಿರುತವಿದು ಧ
ರ್ಮವಿದಧರ್ಮ ವಿದುಶ್ರೇವ್ಯ | ಪಂಹಿತ ವಿದೆಂದರಹುವದೆ ಸತ್ಯವು
|| ೧ || ಪರಮಕಷ್ಟದೊಳು ಶರೀರಾದಿಗಳಿಂದ | ಪರದ್ರವ್ಯಕಿಚ್ಛಿಸ
ದಿಹುದದಾಸ್ತೇಯ || ಧರಿಯೊಳಗೆ ಸ್ತ್ರೀಯರ ಸಂಗವನನುದಿನ | ಬಿ
ಡಿಯದಿಹುದದು ಬ್ರಹ್ಮಚರ್ಯವೆನಿಸುದು || ೨ || ತನ್ನ ಯುವತಿಯು
ಕೂಡ ರುತುಮತಿ ಕಾಲದಲಿ | ಉನ್ನತಿವಡೆಯುವದೆ ನುತಬ್ರಹ್ಮಚ
ರ್ಯ || ತನಗೆ ಸ್ತುತ್ಯಾದಿಯೊಳು ಮೋದಾದಿಯಿಲ್ಲದ | ವಿನುತಸ್ಥಿತಿ
ಯು ಕ್ಷಮೆಯೆನಿಸುವದದು || ೩ || ಸತಿಸುತ ದ್ರವ್ಯಾದಿ ಹಾನಿಯೊ
ಳು ತನಗೆ | ಇನಿತು ವಿಕಾರವಿಲ್ಲದಿಹುದೆ ಧೃತಿಯು || ಸತಿಸುತಾದಿ

ವೈರಿ ಮಿತ್ರಾದಿಗಳು ಬಹು | ಹಿತದಿ ಸಲಹುವದೆ ದಯವೆನಿಪುದು || ೪ || ಸರ್ವ ನಿವೃತ್ತಿ ಪ್ರವೃತ್ತಿಗಳೊಳು | ಸರ್ವದರೊಳು ಸಮಭಾವ ವದಾರ್ಜವು || ಸರ್ವಕಾಲದೊಳುದರಾರ್ಧ ಭಕ್ಷಿಪುದೆ || ಸಾರವಿಧಿಯ ದು ಮಿತಾಹಾರ ವೆನಿಪುದು || ೫ || ತನ್ನಂಗದಿಂದ ಹುಟ್ಟಿದ ಮಲ ಶುದ್ಧಿಯಾಗೆ| ನನ್ನಿಯಿಂದಲಿ ಬಾಹ್ಯಶೌಚವೆನಿಪುದು|| ಬನ್ನವನಿನಿತು ಬಯಸದಿರುವದೆ ಜನರಿಗೆ | ಉನ್ನತ ಸುಖ ಬಯಪುದದಂತರ ಶೌಚ || ೬ || ಇಂತು ಯಮದಶ ಗುಣಗಳನು ತಿಳಿದು || ಅಂತರದೊಳು ನಡೆಯುವನು ನುಡಿಗೆ || ಕಂತು ಹರನಾದ ಗುರು ರಾಮಾರೂಢನ | ಸಾಂತಿದೊರೆಯುವದು ಸಹಜ ಸಹಜ || ೭ ||

## ೧೦ ನೇ ಪದ.

( ದಾಟಿ—ವೇಷವನು ಹಲ್ಲಣಿಸಿ ಎಂಬಂತೆ )

ನಿಯಮ ದಶಗುಣ ಗಣವಿಲ್ಲದವನೆಂತು | ಭಯರಹಿತನಾಗಿ ಮುಕ್ತಿಪಡೆಯುವನು || ಪಲ್ಲ || ತನಗೆನಿತು ಪ್ರಾಪ್ತಿಯು ಅದರೊಳಗೆ ತಾನು | ಬಿನದಿ ಸುಖ ಪೊಂದುವದೆ ಸಂತೋಷವು || ಉನ್ನತ ಪುಣ್ಯಪಾಪ ನಿಕರ ಶ್ರುತ್ಯುಕ್ತಿಯಿಂ | ಚನ್ನಾಗಿ ತಿಳಿದು ನಂಬಿರಲದಾಸ್ತಿಕ್ಯವು || ೧ || ತನುವಿಂದ್ರಿ ಮನವ ಕೃಛ್ರಚಾಂದ್ರಾಯಣ ವ್ರತದಿಂ| ವಿನುತದಿಂದ ನಿಗ್ರಹಿಸುವದೆ ತಪವು || ಧನಧಾನ್ಯ ವಸ್ತ್ರ ಭೂಷಣಾಗಳನೆಲ್ಲ | ಬಿನದಿ ಸತ್ಪಾತ್ರ ಜನಕೀವುದೆ ದಾನವು || ೨ || ಶಿವಶಂಭು ಶಂಕರನ ಮಿಂಚು ರತ್ನಾದಿಯೊಲ್ | ಭುವನ ಬಿಂದು | ಯೋಮ ನಾದ ರೂಪನೆಂದು || ತವೆ ಭಾವಿಸಿ ಹೃದಯದೊಳರ್ಚಿಸುವದೆ | ಶಿವಪೂಜೆಯೆಂಬ ನೇಮವೆನಿಪುದು || ೩ || ಶೃತಿಲೌಕಿಕಪಥವನೋತು ಹೀಯಾಳಿಸಿ | ಮತಿ ಮುಟ್ಟಿ ತ್ಯಜಿಸುವದೆ ಲಜ್ಜೆಯೆನಿಪುದು || ಹಿತವನಿತು ತನಗೆ ಅಧ್ಯಾತ್ಮಬೋಧೆಯೊಳು | ಹಿತದಿನಂಬುವದದನೆ ಮತಿಯೆನಿಪುದು || ೪ || ವೇದಶಿರದರ್ಥವನು ತನಗುರೆ ಪೊಳೆವಂತೆ | ಸಾಧಿಸಿ ತಿಳಿಯುವದೆ ಸಿದ್ಧಾಂತ ಶ್ರವಣವು || ಬೋಧೆಯಿಂದ ಧ್ಯಾತ್ಮ ರಹಸ್ಯದಿರುವಿನ | ಸಾಧನಕೆ ಪರ ನೆನಿಸುವದೆ ಹುತವು

|| ೫ || ಸಕಲ ವಿಷಯವನು ತಿಳಿಯುವದೇ ವೇದ | ಸಕಲ ತಿಳಿಸಿ ಕೊಂಬ ವಿಷಯವೇ ವೇದ್ಯ || ನಿಕರ ವೇನಿಲ್ಲವು ದೃಶಿಯಾತ್ಮನ ಲ್ಲೆಂದು | ಯುಕುತಿಯಿಂದಲಿ ತಿಳಿಯುವದು ಸ್ವಾಧ್ಯಾಯವು || ೬ || ಈ ತೆರದಿಂದಲಿ ದಶಗುಣವ ನರಿದು | ಪೂತ ನಿರ್ಮಲ ಮನಸುಳ್ಳವ ನೆನಿಸಿ || ಪಾತಕ ರಹಿತ ಶ್ರೀಗುರು ರಾಮಾರೂಢರ | ಆತುರದಿಂ ಪೊಂದಿ ಸುಖಿಸದೆ ಮನುಜ || ೭ ||

೧೧ ನೇ ಪದ.

( ಧಾಟಿ—ಶ್ರೀಗುರು ಶಿವನೆ ಕರುಣ ಎಂಬಂತೆ )

ಆಸನದ ಸ್ವರೂಪವನು ನೆರೆ ತಿಳಿದು | ವಾಸನೆಗಳನೆಲ್ಲ ನೀಗಿದವನೆ ಮುಕ್ತ ||ಪ|| ಆಸನದ ಭೇದದೊಳು ಒಟ್ಟು ಎಂಭತ್ತುನಾಲ್ಕು | ಆಸ ನುಂಟದರೊಳು ಶ್ರೇಷ್ಠಗಳು ಸ್ವಸ್ತಿ || ಕಾಸನ ವೀರಾಸನ ಸಿದ್ಧಾಸನವು ಪ | ದ್ಮಾಸನ ಸುಖಾಸನ ಎಂಬವುಗಳೈದು || ೧ || ಎರಡು ತೊಡೆ ಗಳು ಕೆಂದಾಗವುಗಳ ನಡು | ವೆರಡು ಪಾದಗಳಡಗಿರ್ದೂದೆ ಸ್ವಸ್ತಿ ಯು || ಚರಣದ ಎಡದ ಮಡವಡಿಯಾಗಿ ಬಲ | ಚರಣ ಹಿಮ್ಮ ಡದ ತೊಡೆಯುಮೇಲಿರಲ್ವೀರ || ೨ || ಎಡಗಡೆ ಮಡದಿಂದಾಧಾರದೆ ಡೆಯ ನೊತ್ತು | ತ್ತೊಡನೆ ಬಲದ ಮಡವೊತ್ತಿಟ್ಟು ಶಿಶ್ನದ ಮೇ || ಲ್ಗಡೆಯೊಳು ಕಡುನೇರಿತ್ತಾದೊಡಲಿಂದ | ಸಡಗರದಿ ಕೂಡ್ರುವದೆ ಸಿದ್ಧಾಸನವು || ೩ || ಎರಡು ಸಕ್ತಿನಿಗಳ್ಮೇಲಡರಿ ಮಡಂಗಳು | ಸರ ಸವಾಗಿ ಕೂಡ್ರಲು ಪದ್ಮಾಸನವು || ಭರದಿ ತನಗಾವ ತೆರದಿಂ ಪುಟು ವದು ಹರುಷವಂತಾಗಿ ಕೂಡ್ರುವದು ಸುಖಾಸನ || ೪ || ವರವೆನಿಸಿ ದ ಈ ಐದು ಆಸನಂಗಳು | ಪರಮಾರೂಢ ಶ್ರೀರಾಮನ ಹರುಷದಿಂ || ಸ್ಮರಿಸಲು ಯೋಗ್ಯವಾದವುಗಳು ನಿರುತ | ಇರದೆ ಇವನೆ ಸಾಧಿಸ ಲು ಮುಕ್ತನು || ೫ ||

೧೨ ನೇ ಪದ.

( ಧಾಟಿ—ಏಕೋಭಾವದ ಸುಖವೇನು ಬಲ್ಲರು ಎಂಬಂತೆ )

ಪ್ರಾಣಾಯಾಮದ ಲಕ್ಷಣವನ್ನು ತಿಳಿದು | ಮಾಣದೆ ಸಾಧಿಸ

ನವನೆ ಜಾಣನು || ಪಲ್ಲ || ಅತಿ ಹರುಷದಿಂದ ಲತಿ ಭಕ್ತಿಯಿಂದ | ಲತಿ ವಿನಯ ಬಾವದಿಂದತಿ ಧೈರ್ಯದಿಂ || ಅತಿ ರುಜು ಕಾಯವು ಳ್ಳವನಾಗಿ ಗುರು | ನುತಿ ಪಾದವನು ಸ್ಮರಿಸಿ ಮಾಡುವದು || ೧ || ಪೂರಕ ಕುಂಭಕ ರೇಚಕ ತ್ರಯದಿಂ | ಸಾರಿ ನಿಲಿಸುವದು ಹೃದ ಯಾದಿ ಸ್ಥಾನದೊಳು || ಏರಿಪುದೆ ಪೂರಕ ಪಿಡಿಯುವದೆ ಕುಂಭಕ ಬಾ | ಹ್ಯರೊಳು ಬಿಡುವದೆ ರೇಚಕ ವೆನಿಪುದು || ೨ || ಇಂತಿದನು ಸಾಧಿಸಲು ಮನಶುದ್ಧಿ | ಅಂತರಾಯಂಗಳನೆಲ್ಲ ನಾಶಮಾಡಿ || ಕಂ ತು ಹರನಾದ ಶ್ರೀರಾಮಾರೂಢನ ಸುಖವು | ಚಿಂತಿಸದೆ ಪ್ರಾಪ್ತಿಯಾ ಗುವದಿದು ನಿಜ || ೩ ||

೧೩ ನೇ ಪದ.

( ದಾಟಿ— ಶಿವಯೋಗಿ ಸಕಲ ಸಂಸಾರ ಎಂಬಂತೆ )

ಪ್ರತ್ಯಹಾರ ವೆನಿಪುದಿಂತೀಲಕ್ಷಣ | ನಿತ್ಯದಿ ಸಾಧಿಸಲಿದನೆ ಮ ಕ್ತನು || ಪಲ್ಲ || ಹಿತವೆನಿಪ ವಿಷಯವೊಂದಿರಲು ತನಗೆ | ಹಿತವಾ ದ ಯೋಗವ ಮಾಡಗೊಡದೆಂದರಿದು || ತತಕ್ಷಣದಲ್ಲಿ ಆ ಸ್ಥಾನವ ನು ತ್ಯಜಿಸಿ | ಹಿತದಿಂದತಿ ದೂರಪೋಗುವದು ದೇಹಕೆ || ೧ || ದು ರಿತ ಕರ್ಮವ ಜರಿದು ಅಮಳ ಸತ್ಯ | ಕರ್ಮವನು ಮಾಡಲು ಕ ರ್ಮೇಂದ್ರಿಯಕೆ || ಪಿರಿದು ವಿಷಯದೊಳ್ ಚರಿಪ ಇಂದ್ರಿಯಂ | ಹರುಷದಿಂ ತೆಗೆಯಲು ತ್ವರದಿಂದವಕೆ || ೨ || ಎನಿತು ಸ್ಥಾನದೊಳು ನೀಚವಿಷಯಾಳುಂಟು | ಅನಿತೆಲ್ಲವ ಬಿಟ್ಟುತ್ತಮರೋಳ್ ವರ್ತಿಸ ಲು || ಅನವರತಾತ್ಮನು ಸಂಧಾನದಲಿರ್ದು | ಬಿನದಿ ವಿಷಯ ವೃ ತ್ತಿ ತಿರುಗಿಸಲು ಮನಕೆ || ೩ || ಮನವೆಷ್ಟಿಚ್ಛಿಸಲನಿತೆಲ್ಲದರಿಂದವಾ | ಮನಕೆ ಸುಖವ ಕೊಡದಿರಲು ಮತ್ತೆ || ಮನವೆಲ್ಲಿದ್ದೊಡೇ ನಾ ಮ ನಸಿಗೆ ನಾನೆ ಭಿ | ನ್ನನಿಹೆನೆಂದು ಚಿಂತಿಸುವದೆ ಮನಕೆ || ೪ || ಪೊ ರಗೆಷ್ಟು ತೋರುವವು | ಮನಕಿಂದ್ರಿಯಕೆ | ನೆರೆ ಅವನೆಲ್ಲವ ತನ್ನಾ ತ್ಮರೂಪವೆಂ || ದರಿದು ಪರಮಾನಂದ ಶ್ರೀರಾಮಾರೂಢರ ಬರಿಯರಿ ವ ಪೊಂದಲದರುವಿಗೆ || ೫ ||

## ೧೪ ನೇ ಪದ.

( ದಾಟಿ—ಪುರಹರ ನಿನಗಿನ್ನು ದಯಬಾರದೆ ಎಂಬಂತೆ )

ಧಾರಣಾಂಗವನು ಸಾಧಿಸಿದ ನರನು | ಘೋರ ಸಂಸೃತಿಯಿಂದ ಮುಕ್ತನಾಗುವನು || ಪಲ್ಲ || ಚತುರಂಗುಲಾಯತ ನಾಭಿಕಂದದೊಡನೆ| ಹಿತದಿ ಮನವ ನಿಲ್ಲಿಸಲು ಧಾರಣೆಯು || ಮಿತ ಅಂಗುಷ್ಟ ಹೃದಯದಲಿ ಮನವು |ಅತಿ ದೃಢವಾಗಿರಲದುವೆ ಧಾರಣೆಯು || ೧|| ತ್ರಿಕೂಟದೊಳ್ಪೊಳೆವ ಪರಾಕಾಶಾಖ್ಯದ | ಚೌಕಮಧ್ಯದೊಳೊಂದಿ ಮನವಿರಲದುವೆ || ತ್ರಿಕೋಣವಾದ ಬ್ರಹ್ಮರಂಧ್ರದ ನೆಲೆಯೊ | ಳೇಕಾಗಿರಲು ಮನವದುವೆ ಧಾರಣೆಯು || ೨ || ಹೂರು ದಳದಿ ಪೊಳೆವತಿಖಾ ಚಕ್ರದೋಳ್ | ಸಾರಿ ತಡೆಯಲು ಮನವ ಧಾರಣೆಯು|| ಧೀರಸ್ಥಾನಗಳೆನಿಸುವೈದಿವು ಪರ | ಧಾರಣೆಗೆ ಮುಖ್ಯವುತ್ತರೋತ್ತರಾನಂದ || ೩ || ಘೋರ ಸಂಸೃತಿಗೆ ಬೀಜವಾದುದೆ ಮನವು | ಓರಂತಿದನಳಿಯಲು ಮುಕ್ತಿ ಘಟಿಪುದು || ಸಾರತರದಾನಂದದಪೇಕ್ಷಿಗದರಿಂದ | ಧಾರಣೆಯ ಮುಖ್ಯವೆನಿಪುದು ಮನದ || ೪ || ತನುವಿಂದ್ರಿಮನಸಾದಿಗಳೆನಿತೆಲ್ಲವು | ತನಗನುಮತ ವೆನಿಸಾನಂದದಿಂದ || ಉನ್ನತ ಸುಖಾಬ್ಧಿಯೊಡಾರೂಢರಾಮನ | ಸನ್ನುತ ಪಾದದಲಿರಲು ಧಾರಣೆಯು || ೫ ||

## ೧೫ ನೇ ಪದ

( ದಾಟಿ—ಮನುಜ ನೀನೆಡೆವಿಡದ ಎಂಬಂತೆ. )

ಧ್ಯಾನವೆಂದೆನಿಸುವದಾನಂದ ನಿಧಿಯನು | ಧ್ಯಾನಿಸಲು ಅನನ್ಯದಿಂ ಮನುಜನೆ || ಪಲ್ಲ || ಯಾವವಿಷಯದೊಳು ಪ್ರವೃತ್ತಿಸಲು ಮನ | ಭಾವದೋಳದರ ಸಂಬಂಧವಿಲ್ಲದಲೆ || ಯಾವಕಾಲದೊಳಾದರೂ ತನ್ನನೆತಾ | ನೋವಿ ಪರಿಕಿಸುತ್ತಿರಲು ಧ್ಯಾನವೆನಿಪುದು || ೧ || ತನಗಾಧೀನವೆನಿಸಿದೊಡೆಮನವು| ಮನಕೆ ತಾ ಬೇಕಾಗಿ ಮತ್ತೊಂ

ದರೊಳಗ | ಭಿನ್ನನಾಗದೆ ಸಚ್ಚಿದಾನಂದಾತ್ಮನ ಭಾವ | ನನ್ನಿಯಿಂ ಮೊಂದಿರಲು ತದ್ಧ್ಯಾನವೆನಿಪುದು || ೨ || ಮುಕ್ಕಂಣ ನಾನೆಂಬಹಂ ಭಾವವಪಿಡಿದು | ಮಿಕ್ಕಿನ ವಸ್ತುವೆ ಪುಸಿಯೆಂದು ತಿಳಿದು || ಅಕ್ಕರೆ ದಿಂ ಮಹಾದೃಶಿ ಶ್ರೀರಾಮಾರೂಢರೋ | ಕ್ಯೈಕ್ಯವಾಗಿರಲದು ಪರತರ ಧ್ಯಾನವು || ೩ ||

ರ್೬ ನೇ ಪದ.

( ದಾಟಿ—ಗಣಿತವಿದನು ಕೂಡಿ ಕಳೆಯಬಲ್ಲಾತನೆಂಬಂತೆ. )

ಸಮಾಧಿ ಲಕ್ಷಣವನರುಪುವೆನು ನಾ | ವಿಮಲ ಮನಸಿನಿಂ ತಿಳಿಯುವದಿದನು || ಪಲ್ಲ || ಮನವ ಚತುಃಪೀಠಸ್ಥಾನದೊಳ್ ನಿಲ್ಲಿಸಿ | ಬನ್ನಕೊಡುವಂಥ ತ್ರಯವಾಸನೆ ನೀಗಿ || ಚಿನ್ನಿಧಿ ಗುರು ಮಹಾದೇವನಲಿ ಮನವು | ನನ್ನಿಯಿಂಬೆರಿಸಲು ಸಮಾಧಿಯೆನಿಸುದು || ೧ || ಒಂದು ನೇಮದಿಂದ ನಿಲ್ಲಿಸಲು ಮನವ | ಚಂದದಿ ಅದನಳಿದುತೋರ್ಪ ಸಚ್ಚಿದಾ || ನಂದ ನಾನೆಂಬ ಭಾವ ತನಗೆ ತೋರದಿರಲು | ಕುಂದದೆ ವಸವಾಹಿತೆಯೆನಿಪುದು || ೨ || ಮನದ ವಿಕಾರವು ಸಲೆ ನಾಶವಾಗಿ | ಮನವು ನಶಿಸುಳಿದಾನಂದ ಪದವದು || ಘನವೆನಿಸಿ ತಾನೆ ತಾನಾಗಿರ್ಪದದು | ವಿನುತ ನಿಜಸುಖ ಸಮಾಧಿವೆನಿಪುದು || ೩ || ಪರಮಾತ್ಮ ಜೀವಾತ್ಮ ವಾಚ್ಯ ಲಕ್ಷ್ಯವನರಿದು | ವರವೆನಿಸಿದಂಥಾ ಭೇದಭಾವನೆ ಪಿಡಿದು || ಪರಮಾನಂದ ಚಿದ್ಘನ ವಸ್ತುವೆ ತಾನಾ | ಗಿರಲದು ಸಮಾಧಿಯೆಂದೆನಿಪುದು || ೪ || ಬರಿದೆ ತೋರುತಲಿರ್ಪ ಬಾಹ್ಯದೊಳಗಿನ | ಹರುಷ ಖೇದಗಳೆಂಬ ವೃತ್ತಿಯು ಲಯವಾಗಿ | ಬರಿಯರಿವೆನಿಪಾರೂಢ ರಾಮನು | ನೆರೆಕೂಡಿರಲ್ವರಸಮಾಧಿಯೆನಿಪುದು || ೫ ||

ರ್೭ ನೇ ಪದ.

( ದಾಟಿ—ಸಂಬಬೇಡವೊ ಮನುಜ ಎಂಬಂತೆ. )

ಯೋಗಿನೋಡೆಲೊ ಮನುಜ | ಯೋಗಿನೋಡೆಲೊ || ಭೋಗವೆಲ್ಲ ನೀಗಿ ಆತ್ಮ | ರಾಗಿಯಾಗಿ ಇರ್ಪನರನು || ಪಲ್ಲ || ಧನಧಾನ್ಯ

ವಸ್ತ್ರ ವಾಹನ | ತನಯ ಮಾನಿನಿ ಬಂಧುಬಳಗ | ಪಿಸಿತು ದುಃಖ
ಮಯವೆಂದು | ಮನಃಪೂರ್ವಕ ತಿಳಿದವನು || ೧ || ತನುವು ಮೂ
ರು ಮಲಗಳಿಂದ | ಜನಿಸಿ ಬೆಳೆದು ಕ್ಷಯಿಪುದೆಂದು || ತನುವೆ ನರ
ಕದ ಹೊಂಡವೆಂದು ತನುವಿನಲ್ಲಿ ವಿಗತಮೋಹಿ || ೨ || ಅಷ್ಟಮದ
ವನು ಕಳೆದವನು | ಅಷ್ಟಪಾಶ ಮೀರಿದವನು || ದುಷ್ಟ ಕಾಮಕ್ರೋ
ಧಾದಿಗಳ | ನಿಷ್ಠುರದಿಂದ ತ್ಯಜಿಸಿದವನು || ೩ || ಪಂಚಭೂತಾತ್ಮಕ
ಜಗವು | ಮಿಂಚು ಕನಸು ಎಂದು ಹಳಿದು || ಪಂಚಲಕ್ಷಣಾತ್ಮನ
ನ್ನು | ಹಂಚಿಕೆಯಿಂದಲರಿತವನು || ೪ || ನೇಮ ಸುಗುಣಮಣಿಹಾ
ರಾ ಸ್ತೋಮ ಭಕ್ತಕಾಮದೂರಾ || ಸಾಮವೇದಗಳಿಂ ನುತಿಪ |
ರಾಮಾರೂಢನ ಬೆರೆದವನು || ೫ ||

## ೧೮ ನೇ ಪದ

( ದಾಟಿ—ಬೋಧಿಸೆನ್ನನು ಗುರುವೆ ಎಂಬಂತೆ. )

ಕಲ್ಲನೋಡುವರಲ್ಲಾ | ಬಲ್ಲಿದಕ್ಷೇತ್ರ | ವೆಲ್ಲವ ತಿರುಗಿ ನರರು || ಸೊಲ್ಲುಸೊಲ್ಲಿಗೆ ತುಂಬಿಕೊಂಡಾತ್ಮನ ಮರೆದು | ಎಲ್ಲ ಹಣವಕಳೆದು ಕಾಶೀಯಾತ್ರೆಗೆ ಪೋಗಿ || ಪಲ್ಲ || ಇಂದು ತರಣಿ ಬೀದಿಯುಲಿ | ನಡೆದು ಚಂದ | ದಿಂದ ಸುಷುಮ್ನೆಯನೇರಿ || ಕುಂದದೆ ಭಾಸುರ ಮಾನವಾದ ಮೂರ್ತಿಯ | ಅಂದವಾಗಿ ನೋಡಿ ವಂದಿಸದೆ ನರರು || ೧ || ಆರುಚಕ್ರದೊಳು ಭೂರಿ | ಪ್ರಕಾಶಿಪ | ಆರುಲಿಂಗವನು ಜ್ಯಾರಿ | ತೋರಕ್ಷೇತ್ರವೆಂದು ಹಂಪಿ ರಾಮೇಶ್ವರ | ಧೀರಶ್ರೀಶೈಲಾದಿಗಳಲಿ ಪೋಗಿನರರು || ೨ || ಶಮದಮಾದಿ ಸಾಧನ | ವನು ಸಾಧಿಸಿ | ವಿಮಲಾರೂಢ ರಾಮಗೆ || ಮಮತೆಯಿಂದಲಿ ಶರಣುಪೋಗಿ ಸತ್ಯರೂಪ | ಅಮಲಾನಂದಾತ್ಮನ ಪಡೆಯುವದು ಬಿಟ್ಟು || ೩ ||

## ೧೯ ನೆ ಪದ.

( ದಾಟಿ- -ಲಿಂಗಪೂಜೆಯ ಮಾಡಿರೊ ಎಂಬಂತೆ. )

ಯೋಗಿಯಾಗೊ ಮನುಜ | ಪರಮರಾಜ | ಯೋಗಿಯಾಗೊ ಮನುಜ || ಪಲ್ಲ || ಜಾಗರಣ ಸ್ವಪ್ನ ಸುಷುಪ್ತಿಗಳೆಂಬ ಭಾವ | ನೀಗಿ ಸರ್ವವು ಬ್ರಹ್ಮಮಯವೆಂದು ಭಾವಿಸಿ || ಅನುಪಲ್ಲ || ಎರಡೆಂಬ ಪದಾರ್ಥವೇ | ಇಲ್ಲದಬಳಿಕ | ಜರಗಿಸುವದು ತಪವ || ವಿಭೂತಿ ಧಾರಣ ಧ್ಯಾನ್ಯಾದಿ ವ್ರತಗಳನು | ಪರಿಕಿಸಿ ನೋಡಲು ಭ್ರಮರೂಪವೆಂದರಿದು || ೧ || ಪರಬ್ರಹ್ಮರಸಸ್ವಾದವ | ತ್ವರದಿಂದ | ದೊರಕಿಸಬೇಕೆಂಬುವದು || ಬರಿಯ ಭ್ರಾಂತಿಯ ಸ್ವರೂಪವೆಂದರಿದುನೆರೆ | ಪರಿಪೂರ್ಣಾನಂದದೊಳ್ ಕರಿಗೊಂಡು ನೀನು || ೨ || ಮನಸಿನವಾಸನೆಯು | ನಳಿಬೇಕೇ | ಬನ್ನಬಡುವದು ದುಃಖವು || ಎನ್ನುತಸಕಲ ಖೇದ ಭಾವನೆಯನು ಮರೆತು | ಉನ್ನತ ಸುಖನಿಧಿ ಬ್ರಹ್ಮದೊಳು ಬೆರೆತು || ೩ || ಮರಗದೆ ನಿಂದೆಗಳಿಗೆ | ವರಸ್ತುತಿಗೆ | ಹರುಷವನು ಪಡಿಯದೆ || ಹರುಷ ಖೇದಗಳಿಗೆ ಸಾಕ್ಷಿನಾನೆಂದರಿದು | ಜರಿದು ಮನೋವೃತ್ತಿ ಬರಿಯರಿವ ಪೊಂದಿ || ೪ || ಸಕಲ ಜಗದುತ್ಪತ್ತಿ | ಸ್ಥಿತಿಲಯದ | ನಿಕರಕೆ ಬೀಜನೆಂದು | ಸಕಲಭೋಗ ಭೋಗ್ಯ ಪದಾರ್ಥವಾನೆಂದು | ಅಕಲಂಕಾರೂಢ ಶ್ರೀರಾಮನನು ಬೆರೆದು || ೫ ||

## ೨೦ ನೇ ಪದ.

( ದಾಟಿ—ಧ್ಯಾನವೆಂದೆನಿಸುವದಾನಂದ ನಿಧಿಯನು ಎಂಬಂತೆ. )

ಹ್ಯಾಗೆ ವೀರಶೈವನಿವನು ಭೋಗವ | ನೀಗಿ ಯೋಗಾದಿಯನು ಪೊಂದದೆ ಬರಿದೆ || ಪಲ್ಲ || ಶಿವದೀಕ್ಷೆಯನು ಪಡೆಯದೆ ಭವರೋಗ | ತವೆ ನಶಿಸದೆ ಸರ್ವವಸ್ತುಗಳಲಿ || ಶಿವರೂಪವ ನೋಡದೆ ಲಿಂಗಾಂಗಾನು || ಭವಿಯಾಗದೆ ವ್ಯರ್ಥ ಬಾಯಿಲಿ ಪೊಗಳಲು || ೧ || ಇಷ್ಟಪ್ರಾಣ ಭಾವಲಿಂಗದೊಳ್ತ್ರಿಕ್ರಿಯ | ಸ್ಪಷ್ಟಕಾಣದೆ ತ್ರಿಕಾದೊಳು ನೆರೆ | ಇಷ್ಟಪ್ರಾಣಾದಿ ಲಿಂಗಶಿಷ್ಟಾರ್ಚನೆಯನ್ನು

ಯಿಂದಮಾಡದೆ ಮನದೊಳಗೆ ವ್ಯರ್ಥ || ೨ || ಗುರು ನಿಂದೆ ಶಿವನಿಂದೆ ವೇದಾದಿಗಳನಿಂದೆ | ಸೈರಿಸದೆ ಮಗುಳೆ ಪ್ರಾಯಶ್ಚಿತ ಪೊಂದದೆ || ಪರಿಭವ ನಶಿಸದ ಭವಿಗಳಸಂಗವ | ಜರಿಯದೆ ಅನುಭವಿಗಳ ಕೂಡಾಡದೆ || ೩ || ವರಜ್ಞಾನವನು ಬೆಳಿಸುವಪಕೆ ತನ್ನ | ಶರೀರಾದಿಗಳನು ನೆರೆಸೂರೆಗೊಡದೆ || ಜರಿದು ನಿರ್ದಯವನು ಸರ್ವಪ್ರಾಣಿಗಳಲಿ | ಕರುಣವಿಡದೆ ದಾಸನದಾಸನಾಗದೆ || ೪ || ಅಂಗಲಿಂಗದ ಸಮರಸವನು ಪಡೆಯದೆ | ಇಂಗಿತವರಿಯದೆ ಲೋಕರಂಜನೆಯ || ಸಂಗರಹಿತ ಪುಂಗ ಶ್ರೀರಾಮಾರೂಢರ | ಮಂಗಲವಾದಂಥಾ ಸುಖವ ಸವಿಯದೆ || ೫ ||

೨೧ ನೇ ಪದ-

( ದಾಟಿ—ಏನಂತ ಮರೆಯುವೆ ಎಲೆ ಮಾನವಾ ಎಂಬಂತೆ. )

ಅಷ್ಟಾವರಣದ ಲಕ್ಷಣವನು ತಿಳಿದು | ಶಿಷ್ಟಾಚಾರದಿಂ ನಡೆಯುವವನೆ ಮುಕ್ತ || ಪಲ್ಲ || ಗುರುಲಿಂಗ ಜಂಗಮ ಪಾದೋದಕ ವಿಭೂ | ತಿರುದ್ರಾಕ್ಷಿ ಪ್ರಸಾದ ಮಂತ್ರವೆಂಬವೆಂಟು || ವರಮುಕ್ತಿಸಾಧನವಾದಷ್ಟಾವರಣವಿವು | ತ್ವರದಿಂದ ಅವುಗಳನರಿಯುವದು || ೧ || ಇವುಗಳಲಿ ಪ್ರಥಮ ಗುರುಲಕ್ಷಣವನು | ವಿವರಿಸುವೆನಾ ಗುರುವೆಂದರೆ ಸಾಮಾನ್ಯನ | ಲ್ಲವು ನಗರೋರಧಿಕಮೆಂದು ಪರತರ | ಶಿವ ಶ್ರುತಿಗಳು ಸಾರಿ ಕೂಗುತಿರಲು || ೨ || ಭವಭಯವನು ನೀಗಿ ಸರ್ವ ಪದಾರ್ಥವನು | ಶಿವಮಯವೆಂದು ಚರಿಸುವಾತನೆ ಗುರು || ಪವಿತ್ರ ವೇದಾದಿಯ ಮರ್ಮವನರಿದಾತನೆ | ನಿವಹನಳಿಯುವನೆ ಗುರುಭೇದಗಳ || ೩ || ಕೃತಿಯಿಂದಲು ವೇಷದಿಂದಲು ಗುರುವಲ್ಲ | ಅತಿಗತ ಮಾಯನೆ ಗುರುವೆಂದೆನಿಸುವನು || ನತನರರ ಜ್ಞಾನವನ್ನು ಖಂಡ್ರಿಸಿನೀ | ಸತತ ನಿಷ್ಕ್ರಿಯನೆಂದು ಭೋದಿಸುವನೆ ಗುರು ||೪|| ಇಂಥ ಗುರುವಿನಲಿ ಅಷ್ಟಾಂಗಾದಿ ನಾಲ್ಕು | ಉತ್ತಮ ಸಾಧನದಿಂದ ಸೇವೆಯ ಮಾಡಲು || ಚತುರ್ವಿಧ ಪುರುಷಾರ್ಥಗಳು ದೊರೆಯುವವ | ಮತಿವಂತ ಶ್ರೀರಾಮಾರೂಢರ ಕೃಪೆಯಿಂ || ೫ ||

## ೨೨ ನೇ ಪದ.

( ದಾಟಿ—ಚಿರೆಯಬಾರದೆ ಮನುಜ ಎಂಬಂತೆ. )

ಲಿಂಗನೋಡಿರಿ ಇದುವೆ | ಲಿಂಗನೋಡಿರಿ || ಸಂಗರಹಿತ ನಿಸ್ಸಂಗ ತುಂಗ | ಮಂಗಲಾಂಗ ಮೂರ್ತಿಯೆ ವರ || ಪಲ್ಲ || ಸಕಲ ಜಗದುತ್ಪತ್ತಿ ಸ್ಥಿತಿ ಲ|ಯಕೆ ಮೂಲ ಬೀಜವಾದುದೆ || ಸಕಲ ಪ್ರಾಣಿಗಳ ಹೃದಯ | ಸಿಕರದಲ್ಲಿ ಪೊಳೆಯುವದೆ || ೧ || ಸತ್ಯ ನಿರ್ವಿಕಾರ ಪೂರ್ಣ | ನಿತ್ಯ ನಿರ್ಗುಣ ಕ್ರಿಯ ರೂಪ || ವ್ಯತ್ಯಯರಹಿತ ಸ್ವಯಂ ತೇಜ | ಅತ್ಯಧಿಕವೆನಿಸುವದೆ || ೨ || ನಾಮ ರೂಪಕಾಧಾರವಾದುದೆ | ಸೋಮರವಿಗೆ ಪ್ರಕಾಶಿಪುದೆ || ಯೋಮಕಿಂತ ಸೂಕ್ಷ್ಮವಾದುದೆ | ಕಾಮಿಸಿದ ಫಲವ ಕೊಡುವದೆ || ೩ || ನಿರಂಜನ ನಿರಾಲಂಬ | ನಿರುಪಮಾದ್ವಯ ಶುದ್ಧ || ಪರಮಾನಂದ ರಸರೂಪ | ನಿರಘ ನಿರಂತರ ವೆನಿಪುದೆ || ೪ || ಭರದಿ ಇಂಥ ಲಿಂಗವನ್ನು | ಶರಣ ಶ್ರೀ ಪ್ಯಾರೂಢ ರಾಮನ || ಕರುಣದಿಂದ ಪಡೆದವನು | ಧರಣಿಯೊಳಗೆ ಮುಕ್ತನಹುದು || ೫ ||

## ೨೩ ನೇ ಪದ.

( ದಾಟಿ—ಗುರುವರನೆ ನಿನಗಿಂತರಧಿಕರಾರುಂಟು ಎಂಬಂತೆ )

ಜಂಗಮ ಸ್ವರೂಪವು ಸಾಮಾನ್ಯವೇ ಅಲ್ಲ | ಜಂಗುಕಟ್ಟಿದರೆ ಜಂಗಮರಾಗಬಹುದೆ || ಪ || ಸತ್ಯಶಮೆಯೆಂಬ ಕಾವಿವಸನವನುಟ್ಟು | ನಿತ್ಯ ನಿರ್ಗುಣವೆಂಬ ವಿಭೂತಿಯ ಧರಿಸಿ || ಸತ್ಯಸುಖವೆಂಬ ದಂಡವನೆ ಪಿಡಿದು | ಸತ್ಯಭಾವದಿ ಚರಿಸುವವನೆ ಜಂಗಮನು ||೧|| ಕುಲಛಲಗಳಬಿಟ್ಟು ತತ್ವವಿವೇಕವೆಂಬ | ಸಲಲಿತ ಜ್ಞಾನವ ಪಿಡಿದು ಆತ್ಮನ || ನಿಲವನೆ ಕಂಡದರೊಳಗೆ ತಾಂ ಕೂಡಿ ನಲಿ | ನಲಿದಾಡಿ ಸುಖಿಸುವವನೆ ಜಂಗಮನು || ೨ || ಏಳು ವ್ಯಸನವ ನೀಗಿ ಮುಮ್ಮಲವನ್ನು ಕಳೆದು | ನಾಲ್ಕೈದು ಲಿಂಗಗಳ ಮರ್ಮವನು ತಿಳಿದು || ಜಾಲವನಳಿದು ವಿಷಯ ಕಾಲನ ಭಯನೀಗಿ | ಲೀಲೆಯಿಂದಲಿ ಚರಿ

ಸುವವನೆ ಜಂಗಮನು || ೩ || ಪಂಚವಿಂಶತಿ ತತ್ವವನು ನೇತಿಗಳೆದು | ಪಂಚಲಕ್ಷಣ ಸತ್ತು ಚಿತ್ತಾದಿಯನು ದಳೆದು | ಸಂಚಿತಾಗಾಮಿ ಕರ್ಮಗಳಯಿಸಿ ಪ್ರಾರಬ್ಧದಿಂ | ಸಂಚರಿಸುತಿರುವವನೆ ಜಂಗಮನು || ೪ || ಗುರುಲಿಂಗ ಜಂಗಮ ಈ ಮೂರು ವಸ್ತುವು | ಗುರುರಾಮಾರೂಢರ ನಿಜರೂಪವಹುದು || ಪರಿಕಿಸಿ ಇಂಥ ಜಂಗಮ ಲಕ್ಷಣವನು | ಶರಣು ಪೋಗಲು ವರಮುಕ್ತಿ ದೊರೆವುದು || ೫ ||

## ೨೪ ನೇ ಪದ.

( ದಾಟಿ—ಶ್ರೀಗುರುವಚನದಿಂದಧಿಕ ಸುಧೆಯುಂಟೆ ಎಂಬಂತೆ )

ಪಾದೋದಕದ ಲಕ್ಷಣವನು ತಿಳಿದು | ಸಾದರದಿಂದಲಿ ಪಾನ ಮಾಡಲು ಮುಕ್ತಿ || ಪ || ಪದವೆಂದರೆ ಶ್ರೀಗುರುಸ್ವರೂಪವು | ಉದಕವೆಂದರೆ ಗುರುಕರುಣಾಮೃತವು || ಮುದದಿ ಇಂಥ ಪಾದೋದಕವ ಭಕ್ಷಿಸಲು | ಸದಮಳ ಜ್ಞಾನವು ಪ್ರಾಪ್ತಿಯಾಗುವದು || ೧ || ದುರಿತ ಗುಣಗಳ ನಳಿದು ಸುಗುಣಗಳ | ಹರುಷದಿಂ ಪರಿಗ್ರಹಿಸುವದೆ ಪಾದೋದಕ || ಭರದಿ ಜೀವೇಶ್ವರ ಸ್ವರೂಪವನು ಮಥಿಸಿ | ಪರಮಾತ್ಮ ನಾನೆನ್ನುವದೆ ಪಾದೋದಕ || ೨ || ನಿರುತದಿಂದಲಿಂಥ ಪಾದೋದಕವನು | ಉರುತರಭಕ್ತಿಯಿಂ ಚನ್ನಾಗಿ ಶೇವಿಸಲು || ಗುರುರಾಮಾರೂಢರ ಸಾಯುಜ್ಯಪದವಿಯು | ದೊರೆಯುವದು ಸಹಜವಿದು ನಿಜ || ೩ ||

## ೨೫ ನೇ ಪದ.

(ದಾಟಿ—ಮನುಜ ನೀನೆಡೆವಿಡವ ಎಂಬಂತೆ.)

ಪ್ರಸಾದವೆಂಬುದರರ್ಥವ ನರಿಯಿರಿ | ಪ್ರಸಾದದಿಂದಲೆ | ಸಂಸಾರ ನಿವೃತ್ತಿ || ಪಲ್ಲ || ಸನ್ನುತ ಶ್ರುತಿಗಳು ಪ್ರಸಾದದಿಂದಲೆ | ಜನ್ಮ ಮರಣರೂಪ ಭವಸಾಗರವು || ಚನ್ನಾಗಿ ನಾಶವಾಗಿ ವಿನುತ ನಿಜಸುಖ | ಭಾನವಾಗುವದೆಂದುರೆ ಒರೆಯುತಿರಲು || ೧ || ವಿಹಿತ ಶ್ರೀ ಸದ್ಗುರು ಬೋಧ ಮಾಡುವ | ವಿಹಿತ ಮಹಾವಾಕ್ಯ ಪ್ರಸಾದವೆನಿಸುದು || ಬಹು ಪ್ರೇಮದಿಂದಲಿದನು ಶೇವಿಸಲು | ಸಹಜ ನಾಶವಾಗುವ

ದು ಭವರೋಗ || ೨ || ಪರಮ ತತ್ವಮಸಿಯೆಂಬ ಪ್ರಸಾದವನು | ವರಯೋಗಾನಂದ ಶ್ರೀರಾಮಾರೂಢರ || ಕರುಣ ಕಟಾಕ್ಷದಿಂ ಪಡೆದು ಭುಂಜಿಸುವನು | ಪರಮ ಚಿದ್ಘನ ಪೂರ್ಣಾನಂದ ಪೊಂದುವನು||೩||

## ೨೬ ನೇ ಪದ.

( ದಾಟಿ—ನಿನ್ನ ಕಣ್ಣಿಂದ ಕಾಣೆಲವೋ ಎಂಬಂತೆ )

ವಿಭೂತಿಯೆಂಬುದರಿಂಗಿತವ ನರಿದು | ಅಭವನಾಗಿರುವವನೆ ಮುಕ್ತನು || ಪಲ್ಲ || ವಿಭೂತಿಯೆಂದರೆ ಪ್ರಕಾಶವಾದಲಿಂಗ | ವಿಭೂತಿ ಧಾರಣವೆಂದರಿಯಿರಿ || ವಿಭುವಾದಾತ್ಮ ನಾನೆಂದು ತಿಳಿಯುವದೆ | ವಿಭೂತಿ ಧಾರಣ ವರಿದು ನೋಡಿರಿ || ೧ || ಇದೆ ವಿಭೂತಿ ಅನ್ಯೋನ್ಯಕಾರಣದಿಂ | ದೈದು ನಾಮವ ಪೊಂದಿಹುದದನು ಪೇಳ್ವೆ || ಸದಮಳ ಶಿವತತ್ವ ಪ್ರಕಾಶವ ಮಾಡು | ವದರಿಂದ ಭಸಿತ ನಾಮ ಪಡೆದಿಹುದು || ೨ || ದೊರಕಿಸಿ ಕೊಡುವದರಿಂದಣಿ ಮಾದಿ | ಪರಮ ಸಿದ್ಧಿಗಳನು ವಿಭೂತಿ ಎನಿಸಿಹುದು || ಶರೀರಾದಿಗಳಿಂದುತ್ಪನ್ನವಾದ ಕಲುಷ | ಹರಿಸುವದರಿಂದ ಭಸ್ಮವೆನಿಸಿಹುದು || ೩ || ಮೂರು ತಾಪವನು ನಶಿಸುವದರಿಂದ | ಕ್ಷಾರವೆಂಬುವ ಪೆಸರು ಪಡೆದಿಹುದು || ಪಾರಮಾರ್ಥದಿಂಭೂತಾದಿ ಭೀತಿಯಿಂದ | ಸಾರಿ ರಕ್ಷಿಪುದರಿಂ ರಕ್ಷೆಯೆನಿಸಿಹುದು || ೪ || ವಿಭೂತಿಯೆಂದರೆ ಜ್ಯೋತಿರ್ಮಯವೆಂದು | ಗಂಭೀರ ಶ್ರುತಿಯು ಸಾರಿಕೂಗುವದು || ಪ್ರಭಾಸುರವೆನಿಸಿದಿದನೆ ಧರಿಸಲು | ಶುಭಕರ ರಾಮಾರೂಢರ ಸುಖವು ಪ್ರಾಪ್ತಿ ||೫||

## ೨೭ ನೇ ಪದ.

( ದಾಟಿ—ಜರಗಿಸೊ ಮನುಜನೆ ಎಂಬಂತೆ )

ರುದ್ರಾಕ್ಷಿಯನು ಧರಿಸೊ ಎಲೆ ಮನುಜ | ರುದ್ರಾಕ್ಷಿ ಇಂತೆಂಬುವರ್ಥವನರಿದು ||ಪಲ್ಲ|| ರುದ್ರನೆಂದರೆ ಪರಿಭವನಾಶನು | ಅದ್ವಯ ಜ್ಞಾನ ನೇತ್ರವು ಅಕ್ಷಿ ಎನಲು || ಪದುಳದಿಂದಲಿಂಥ ರುದ್ರಾಕ್ಷಿ ಧರಿಸಲು | ಚಿದದ್ವಯಾನಂದ ರೂಪವು ನೀನೆ || ೧ || ಪರಶಿವನೆಂ

ದು ರುದ್ರಾಕ್ಷಿ ಧಾರಣನು | ಪರವು ಶ್ರುತಿಗಳು ಸಾರಿ ಕೂಗುವವು || ಅರುಹಿದಿಲ್ಲಿಯು ರುದ್ರಾಕ್ಷಿಯಲ್ಲದೆ ಅನ್ಯ | ಧರಿಸಿದರೆಂತು ಶಿವನು ಗೊಲ್ಲನಂತೆ || ೩ || ಅರುವವಿಲ್ಲದೆ ವ್ಯರ್ಥ ರುದ್ರಾಕ್ಷಿ ಮಾಲೆಯನು | ಧರಿಸಿ ಜಪ ಮಾಳ್ಪೆನೆಂಬ ಭ್ರಮೆಯ ಬಿಟ್ಟು || ವರಜ್ಞಾನವೆಂಬ ರುದ್ರಾಕ್ಷಿಯನುಧರಿಸಿ | ಪರತರಾನಂದ ರಾಮಾರೂಢರಪೊಂದು||೪||

## ೨೮ ನೇ ಪದ.

( ದಾಟಿ—ನಿಮಿಷವಾಗಲಿ ನಿಮ್ಮ ನೆನಹು ನಿಂದೊಡೆ ಮುಕ್ತಿ ಎಂಬಂತೆ )

ಶಿವಪಂಚಾಕ್ಷರಿ ಮಂತ್ರದ ಮರ್ಮವನು | ಜಪದಿ ತಿಳಿದು ಪಠಿಸಲು ಮುಕ್ತಿಯು||ಪ||ಸಕಲತತ್ವದೊಳು ಶಿವತತ್ವ ಮೇಲಾದಂತೆ | ಸಕಲ ಮಂತ್ರದೊಳಗಿದುವೆ ಶ್ರೇಷ್ಠವು || ಅಕಲಂಕ ಶಿವಜ್ಞಾನಕಿದುವೆ ಮೂಲವು | ಯುಕುತಿಯಿಂದಲಿದರಿಂಗಿತವನರಿಯೊ || ೧ || ಸಕಲಾಧಾರವಾದ ಶಿವಜ್ಞಾನವಾದ ಬ | ಳಿಕನ್ಯ ದೇವರು ಪಯೋಗವಿಲ್ಲದಂತೆ || ಅಕಲಂಕ ಪಂಚಾಕ್ಷರಿ ಜ್ಞಾನವಾಗಲು | ನಿಕರದುಪಯೋಗವಿಲ್ಲನ್ಯ ಮಂತ್ರಗಳ || ೨ || ಶಿವಮಂತ್ರವಿದು ಸಕಲ ಮಂತ್ರಗಳ | ನಿವಹದೊಳಗೆ ಶ್ರೇಷ್ಠನ್ಯಾತಕೆನಲರಿ || ಶಿವ ಪಂಚಾಕ್ಷರಿಯಿದು ಶಿವಜೀವರೈ | ಕ್ಯವ ಬೋಧಿಪುದದೆಂತೆನಲು ಕೇಳು || ೩ || ನಮಪದದಿಂದ ಜೀವಪದವನು | ಅಮಳ ಶಿವಪದದಿಂದೀಶ ಪದವನು || ವಿಮಲ ಬ್ರಹ್ಮದಲ್ಲಿ ಅಯಪದದಿಂದ | ತಿಮಿರವನಾಶಿಸಿ ಐಕ್ಯ ಮಾಡುವದು || ೪ || ಶಿವಪಂಚಾಕ್ಷರಿಯು ಅಂಗಲಿಂಗದ್ಯೈ | ಕ್ಯವೆಂದು ಶ್ರುತಿಯು ಬೋಧ ಮಾಡಲು || ವಿವರಿಸಿದನೆ ನಿರಂತರ ಹರುಷದಿಂ | ತವೆಸ್ಮರಿಸಲು ಮೋಕ್ಷವಾಗುವದು || ೫ || ನಾನಿಲ್ಲಿ ಪೇಳಿದಷ್ಟಾವರಣವಿವು | ಜಾನಿಸಿನೋಡಲು ಅಂತರವೆನಿಪವು || ಮಾಣದಿರಲಿವುಗಳನು ನಿರಂತರ | ಅನಂದಸಾಗರ ಪ್ರಾಪ್ತಿಯಾಗುವದು || ೬ || ಇವುಗಳಿಂದ ಬೇರಾದಷ್ಟಾವರಣದಿಂ | ಶಿವೈಕ್ಯವಾಗದೆ ಭೋಗವಾಗುವದು || ಭವರೋಗವನೀಗಿ ಬ್ರಹ್ಮಾನಂದದಿಮೆ | ರೆಪ ಸದ್ಗುರು ರಾಮಾರೂಢರ ಕೃಪೆಯಿಂ || ೭ ||

## ೨೯ ನೇ ಪದ.

( ದಾಟಿ — ವನಿತೆಯ ರೊಲವಾವ ಎಂಬಂತೆ. )

ಪವಿತ್ರವಾದಷ್ಟಾವರಣಗಳಿಂದಲಿ | ಶಿವಪದವಿಯ ಪೊಂದಿದವರ ಪೇಳ್ವೆ || ಪಲ್ಲ || ಗುರುನಿಷ್ಠೆಯಿಂ ವೇಳ್ಯಾತ ಮಹೇಶ್ವರನು | ಗುರು ಭಕ್ತಯ್ಯನು ಮುಕ್ತರೆನಿಸಿಹರು || ವರಲಿಂಗನಿಷ್ಠೆಯಿಂ ಸಿಂಧುಬಲ್ಲಾಳ ಸೌಂ | ಧರನು ಕನ್ನಪ್ಪನು ಸುಖವ ಪೊಂದಿಹರು || ೧ || ವರಜಂಗಮ ನಿಷ್ಠೆಯಿಂ ಕೋಲ್ಪಲಿಯಾಂತ | ಚಿರಪುಲಿಯಾಂಡರು ಮುಕ್ತಿ ಪಡೆದಿಹರು|| ವರಪಾದೋದಕದಿಂ ಕಾಶೀರಾಜಯ್ಯನು | ಸ್ಥಿರವಾದ ಹರುಷವನು ಪೊಂದಿಹರು || ೨ || ಪ್ರಸಾದದಿಂ ಘೋರಾಕ್ಷ ಬಿಬ್ಬಿಬಾಚಯ್ಯನು | ಬಸವನು ಪರಮ ಸುಖವ ಪೊಂದಿಹರು || ಭಸಿತ ನಿಷ್ಠೆಯಿಂ ಕುಂಬಾರ ಗುಂಡಯ್ಯನು | ಸಸಿನವಾದಾನಂದ ಪಡೆದಿರುವನು || ೩ || ರುದ್ರಾಕ್ಷಿಯಿಂದಲಿ ಚಾರಮುರಾಯನು | ಸದ್ರೂಪ ಮುಕ್ತಿಯಂಪಡೆದಿರುವನು || ಚಿದ್ರೂಪ ಮಂತ್ರದಿಂ ಮಂತ್ರಜಾತನು ನಾ | ರದ ಶ್ವೇತ ಹರಿಮೋಕ್ಷ ಪೊಂದಿಹರು || ೪ || ಇಂತಿವರೆಲ್ಲರೊಂದೊಂದಾವರಣದಿಂ | ಸಂತ ಶ್ರೇಷ್ಠಾರೂಢರಾಮನ ಪೊಂದಿಹರು || ಸಂತಸದಿಂದಷ್ಟಾವರಣ ನಿಷ್ಠೆಯಿರಲು | ಅಂತವಾಗದಾನಂದ ಪೊಂದುವದೇನಾಶ್ಚರ್ಯ || ೫ ||

## ೩೦ ನೇ ಪದ.

( ದಾಟಿ—ನಿನ್ನೊಳಿಹುದು ಸತ್ಯ ವೆಂಬಂತೆ. )

ಷಟಸ್ಥಲಗಳ ಮರ್ಮವನು ತಿಳಿದು | ಧಿಟವಾಗಿ ಸಂಬಿದಾಗಲೆ ಮುಕ್ತಿಯಹುದು || ಪಲ್ಲ || ಮೊದಲು ಸ್ಥಲವೆನಲು ಬ್ರಹ್ಮಸ್ವರೂಪವು | ಆದೆ ಬ್ರಹ್ಮವು ತನ್ನಲ್ಲಿ ಲೀನವಾದ | ಸದಮಳ ಚಿಚ್ಛಕ್ತಿಯು ಸ್ಫುರಣದಿಂದ | ವುದಿಸಿದವು ನೋರೆಯಂತೆ ಲಿಂಗಾಂಗಸ್ಥಲ || ೧ || ಲಿಂಗವೆ ಪೂಜ್ಯವು ಅಂಗವೆ ಪೂಜಕವು | ಲಿಂಗವೆ ಬ್ರಹ್ಮವು ಅಂಗವೇ ಜೀವವು || ಅಂಗವೆ ಚಿಚ್ಛಕ್ತಿರೂಪ ಲಿಂಗಪ್ರೇರಣೆಯಿ

ದ್ಯೋ| ಗಾಂಗವೆಂಬ ಕಾರಣ ಶರೀರ ವಾಯ್ತೀ ||೨|| ಅಂಗಉಪಾಧಿಯಿಂದ ಆ ಲಿಂಗವೆ ಭಾವ| ಲಿಂಗವೆಂಬ ಪೆಸರು ಪಡೆಯಿತು ಯೋ| ಗಾಂಗರೂಪ ಕಾರಣ ದೇಹ ವೆಂಬಂಗವೆ ಭೋ|ಗಾಂಗ ರೂಪ ಸೂಕ್ಷ್ಮಶರೀರ ವಾಯಿತೀ || ೩ || ಅಂಗ ಉಪಾಧಿಯಿಂದ ಆ ಲಿಂಗವೆ ಪ್ರಾಣ | ಲಿಂಗವೆಂಬ ನಾಮ ಪಡೆಯಿತು ಭೋ|ಗಾಂಗರೂಪ ಸೂಕ್ಷ್ಮ ಶರೀರವೆಂಬಂಗವೆ ತ್ಯಾ|ಗಾಂಗವೆಂಬ ಸ್ಥೂಲ ಶರೀರ ವಾಯಿತೀ || ೪ || ಅಂಗ ಉಪಾಧಿಯಿಂದ ಆ ಲಿಂಗವೆ ಇಷ್ಟ | ಲಿಂಗವೆಂಬ ನಾಮವನು ಪಡೆಯಿತೀ || ಅಂಗತ್ರಯದಂತರ್ಗತವೆ ಆರು | ಲಿಂಗಗಳಾದವು ಉಪಾಧಿ ಭೇದದಿಂ || ೫ || ಹೆರತುಪ್ಪ ಕರಗಿದ ತುಪ್ಪಕ್ಕೆ ಭೇದವು | ಇರುವದಿಲ್ಲವೋ ಹ್ಯಾಗೆ ಹಾಗೆ ಲಿಂಗಾಂಗವು || ಶರಧಿಯೊಳಗಿನ ಗುರುಳಿ ಶರಧಿಯೆವಾದಂತೆ | ಪರಬ್ರಹ್ಮದೋಳ್ಪುಟ್ಟಿದ್ದೆಲ್ಲವು ಬ್ರಹ್ಮವು || ೬ || ಇಂತಿವುಗಳ ಮರ್ಮವನು ತಿಳಿದು | ಸಂತಸದಿಂದಿರುವವನೆ ಪರಮ | ಸಂತ ಶ್ರೇಷ್ಠಾರೂಢ ಶ್ರೀಗುರು ರಾಮನ | ಅಂತವಾಗದಾನಂದ ಪೊಂದುವನಿದು ಸತ್ಯ || ೭ ||

೩೧ ನೇ ಪದ.

( ದಾಟಿ—ವೃಢನಾಮ ರಾಮನು ಎಂಬಂತೆ )

ಅರಿಯೊ ಮನುಜನೆ ಆಱುಸ್ಥಲಗಳ | ಇರವನು ನಾನಿಲ್ಲಿ ಪೇಳುವೆ ಕ್ರಮದಿಂ || ಪಲ್ಲ || ಭಕ್ತಿ ಸ್ಥಲದೊಳು ನಾಲ್ಕುದಳಾಧಾರ | ಚಕ್ರ ನಕಾರ ಪ್ರಣಮಾಚಾರಲಿಂಗ || ಶಕ್ತಿ ಕ್ರಿಯಾ ಗಂಧಪ್ರಸಾದ ಘ್ರಾಣಮುಖಾ| ದ್ನಿಕರುಂಟು ಒಂದಕ್ಕೊಂದು ಸಂಬಂಧಿಸಿ || ೧ || ಚಕ್ರ ಸ್ವಾಧಿಷ್ಠಾನ ಆರು ದಳಗಳು | ಮಕಾರ ಪ್ರಣವು ಗುರುಲಿಂಗ ಇಚ್ಛಾ || ಶಕ್ತಿ ರಸಪ್ರಸಾದ ಜಿಂಹೆ ಮುಖಾದಿ | ನಿಕರುಂಟು ಮಹೇಶ್ವರ ಸ್ಥಲದಲಿ || ೨ || ಪ್ರಸಾದಿ ಸ್ಥಲದಲಿ ಮಣಿಪೂರಕ ಚಕ್ರ| ದಶದಳಗಳು ಶಿಕಾರಪ್ರಣಮವು || ಮಿಸುಪ ಶಿವಲಿಂಗ ಜ್ಞಾನಶಕ್ತಿರೂಪ | ಪ್ರಸಾದ ನೇತ್ರಮುಖಾದಿ ಚಯವುಂಟು || ೩ || ಚಕ್ರವು ಅನಾಹತ ದ್ವಾದಶದಳಗಳು || ವಕಾರ ಪ್ರಣಮ ಜಂಗಮ ಲಿಂಗವು

|| ಶಕ್ತಿ ಆದೀಸ್ಪರ್ಶ ಪ್ರಸಾದ ತ್ವಕ್ | ಮುಖಾದುಂಟು ಪ್ರಾಣಲಿಂಗ ಸ್ಥಲದಲಿ || ೪ || ಚಕ್ರವಿಶುದ್ಧಿ ಷೋಡಶದಳಗಳು | ಯಕಾರ ಪ್ರಣಮು ಪ್ರಸಾದ ಲಿಂಗಪರ || ಶಕ್ತಿ ಶಬ್ದಪ್ರಸಾದ ಶ್ರೋತ್ರ ಮುಖಾದಿ | ನಿಕರದಿಂದಿರುವದು ಶರಣ ಸ್ಥಲವು || ೫ || ಐಕ್ಯ ಸ್ಥಲದಲಿ ಎರಡು ದಳಗಳು | ಚಕ್ರ ಅಗ್ನಿ ಓಂಕಾರ ಪ್ರಣಮುವು || ಅಕಲಂಕ ಮಹಾಲಿಂಗ ತೃಪ್ತಿ ಪ್ರಸಾದ ಚಿಚ್ಛಕ್ತಿ ಹೃದಯ ಮುಖಾದಿ ಚಯುವುಂಟು || ೬ || ಆರು ಸ್ಥಲದಲಿ ಅಡಕಾಗಿರುವವು | ಮೂರುಲಿಂಗ ವಿದನೆಲ್ಲವ ತಿಳಿದು || ಮೂರು ಲಿಂಗವನು ಪರಮ ನಿಷ್ಟೆಯಿಂದ | ಅರ್ಚಿಸಲು ರಾಮಾರೂಢರ ಸುಖಪ್ರಾಪ್ತಿ || ೭ ||

೩೨ ನೇ ಪದ.

( ಧಾಟಿ—ಆರೇನು ಮಾಡುವರು ಆರಿಂದಲೇನಹುದು ಎಂಬಂತೆ. )

ಜಾತ್ಯಾದಿಯಿಂದ್ಯಾವನಿದ್ದರೇನವನು ಪುನೀತಾಚಾರದಿಂ ಶ್ರೇಷ್ಟನೆನಿಸುವನು || ಪಲ್ಲ || ಸೂಳೆಯಾಮಗನಾದ ವಶಿಷ್ಟನು ಜ್ಞಾನ | ಲೋಲುಪ್ತನಾಗಿ ಬ್ರಹ್ಮಋಷಿಯಾಗಿಲ್ಲವೆ || ಕೀಳಮುಚ್ಚಿಗಾರನಾದ ವಿಶ್ವಾಮಿತ್ರ | ಮೇಲಜ್ಞಾನದಿಂ ಬ್ರಹ್ಮಋಷಿಯಾಗಿಲ್ಲವೆ || ೧ || ನಾರದನು ದಾಸಿಯ ಸುತನಿದ್ದು ಶಿವಾಚಾರದಿಂದ ಶಿವಬ್ರಾಹ್ಮಣನಾಗಿಲ್ಲವೆ || ಧೀರಗೌತುಮುಮುನಿ ಅಗಸಾಲನಿದ್ದು ಶಿವಾಚಾರದಿಂ ಬ್ರಹ್ಮಸಭೆಗೆ ಮುಖ್ಯನಾಗಿಲ್ಲವೆ || ೨ || ಬೇಡನಾದ ವಾಲ್ಮೀಕಿಋಷಿಯು ಜ್ಞಾನದಿಂ | ನಾಡೆ ವಿಪ್ರಕುಲಕೆ ರಾಜಾಂಶನಾಗಿಲ್ಲವೆ || ಮಾಂಡವ್ಯಋಷಿಯು ಮಾದಿಗನಿದ್ದು ಜ್ಞಾನವ | ಕೂಡಿ ವಿಪ್ರಕುಲಕೆ ನೃಪಾಲ ನಾಗಿಲ್ಲವೆ || ೩ || ಧೀರ ವ್ಯಾಸನು ಕಬ್ಬಲಗಿತ್ತಿಯ ಮಗನ್ನಿದ್ದು | ಪಾರಮಾರ್ಥ ಜ್ಞಾನದಿಂ ಬ್ರಾಹ್ಮಣನಾಗಿಲ್ಲವೆ || ಭಾರದ್ವಾಜ ಮುನಿಯು ಬಡಿಗನಿದ್ದು ಶಿವಾಚಾರದಿಂ ಬಾಹ್ಮಣರ ಗುರುವಾಗಿಲ್ಲವೆ || ೪ || ಹೊಲಿಯನಾದ ಜಾಮುಳಋಷಿಯು ಶಿವಜ್ಞಾನದಿಂ | ದಲಿ ಶ್ರೇಷ್ಟ ಶಿವ ಬ್ರಾಹ್ಮಣನಾಗಿಲ್ಲವೆ || ಪ್ರಳಯಕಾಲದೊಡೆಯನಾಗಿಲ್ಲವೆ ತಪದಿಂದಲಿ ಕಂಚಗಾರನಾದ ರೋಮಜ

ಮುನಿಯು || ೫ || ಡೋರಕಕ್ಕಯ್ಯನು ಪೊಂದಿದರಿಂ ವರಶಿವಾ | ಚಾರವನು ಅವನ ಮಿಕ್ಕ ಪ್ರಸಾದವನು|| ವೀರಶೈವನಾದ ಬಸವನು ಸ್ವೀಕರಿಸಿ | ಧಾರುಣಿಯೊಳಗೆ ಶ್ರೇಷ್ಠನೆನಿಸಿಲ್ಲವೆ || ೬ || ಓತು ಇವರ ಇತಿಹಾಸವನೋಡಲು | ಜಾತಿಯಿಂ ಹೊಲೆಯನಾದಾಗ್ಯೂ ಜ್ಞಾನದಿಂ || ಜಾತಿಯಲಿ ಮೇಲಾಗಿ ಶ್ರೀರಾಮಾರೂಢರ | ಪೂತ ಸುಖ ಪೋದುವನೆಂಬುವದು ಸಿದ್ಧ || ೭ ||

೩೩ ನೇ ಪದ.

( ದಾಟಿ—ಪಡಿವೆ ನೀನೆಂದಿಗೆ ಪರಮುಕ್ತಿಸುಖವನು ಎಂಬಂತೆ. )

ಆಗದಾಗದು ಮುಕ್ತಿ ನಿಜಜ್ಞಾನವಿಲ್ಲದೆ | ಯೋಗ್ಯವಲ್ಲದ ಸಿದ್ಧಿಯಿಂ ಪೂಜ್ಯಗೊಂಡರೂ || ಪ || ಸತ್ವರದಿಂದಲಿ ಅಣಿಮಾಮಹಿಮಾ ಈ| ಶತ್ವ ವಶತ್ವ ಪ್ರಾಪ್ಯ ಪ್ರಾಕ್ರಾವ್ಯಾದಿ || ಸತ್ವಗುಣದ ಸಿದ್ಧಿಯನು ವಶಮಾಡಿಕೊಂಡು | ತತ್ವವರಿಯದ ಲೋಕ ಪ್ರಖ್ಯಾತನಾದರೂ || ೧ || ದೂರದರ್ಶನ ಪರಕಾಯ ಪ್ರವೇಶ| ನೂರ್ಮಿ ಮನೋಯೋಗ ಸ್ವೇಚ್ಛಾಮರಣ || ದೂರಶ್ರವಣ ಕಲಾಕ್ರಿಡಾಜ್ಞಾಯೆಂಬ | ಶೂರ ಸಿದ್ಧಿಗಳಿಂದ ಭೋಗವಲ್ಲದೆ || ೨ || ಕಾಲಜ್ಞಾನ ಬಾಧಕ ಚಿತ್ತಾಭಿಜ್ಞ ವಿಜಯ | ಮೇಲೆನಿಸಿದ ಸ್ಥಂಭನ ಸಿದ್ಧಿಗಳನು|| ವೇಳೆಯರಿತು ಸಾಧಿಸಿ ಲೋಕದೊಳಗೆ | ಮೇಲೆ ನಿಸಿದರ ಭೋಗತಿಯು ಅಲ್ಲದೆ || ೩ || ಇನ್ನು ಅಧಮಾಧಮವೆ ನಿಸುವ ಮರಣ | ಜನ್ಮ ಮೋಹನ ಆಕರ್ಷಣ ಉಚ್ಚಾ|| ಟನ ಸ್ಥಂಭನವೆಂಬ ಆರು ಸಿದ್ಧಿಗಳನು | ಅನವರತ ಮಾಡಲ್ನರಕವಲ್ಲದೆ || ೪ || ಯನ್ನಂಗದೊಳು ದೇವರು ಬರುವನೆಂದು | ನಿನ್ನ ಮಾತನು ಪೇಳುವೆನು ಕೇಳೆಂದು || ಉನ್ನತಾಸನ ಹಾಕಿ ಪರರಿಂ ಪೂಜ್ಯಗೊಂಬಗೆ | ನನ್ನಿಯೊಂದು ಮೆಚ್ಚಿ ಅರ್ಚಿಸುವವರಿಗೆ || ೫ || ಮೃತ್ತಿಕಾ ತಾಮ್ರ ಕಾಷ್ಠ ಶಿಲಾದಿಗಳಿಂದ | ಉತ್ತಮ ಮೂರ್ತಿಗಳನು ನಿರ್ಮಿಸಿ ಮತ್ತೆ || ಸತ್ಯವುಳ್ಳದೇವರೆಂದು ಭಾವಿಸಿ ಪೂಜಿ | ಸುತ್ತಲು ತಮ್ಮ ತಾವರಿಯದ ನರರಿಗೆ || ೬ || ಶಿವರಾತ್ರಿ ನವರಾತ್ರಿ ಶನಿಪ್ರದೋಷ ಯೋಗ | ತವೆ ಸೋಮ

ವಾರ ವ್ರತ ನಿರಾಹಾರಾದಿ || ಇವೆಲ್ಲವುಗಳ ಮಾಡುತ ಸಿದ್ಧಿ ಜನರ | ಸವಿನುಡಿ ಆಲಿಸುವ ಹೀನಜನರಿಗೆ || ೭ || ಉನ್ನತವಾದ ಸೋಹಂ ಮಂತ್ರ ವಿರಲಿಕ್ಕೆ | ಅನ್ಯ ಮಂತ್ರಗಳಂ ಮಂಡೂಕದಂತೆ || ಚನ್ನಾಗಿ ಪಠಿಸುತತರಗೆಲೆಯನ್ನು | ತಿನ್ನುತ ತಪವನು ವೃದ್ಧಿಸುವವರಿಗೆ ||೮|| ಹಿಂದಿನ ಋಷಿಗಳ ಮಾರ್ಗವನು ಬಿಟ್ಟು | ಚಂದವಾಗಿ ಸಿದ್ಧಿಮಹಾತ್ಮೆಯಿಂದಲಿ || ತಂದು ಮಳೆಯನು ಲೋಕ ಪೂಜ್ಯಗೊಂಬಗೆ | ಹಂದಿಶ್ವಾನಾದಿಗಳ ಜಲ್ಮವಲ್ಲದೆ || ೯ || ಪೂರ್ವದೋಳ್ಪೇಳಿದನೇಕ ಪ್ರಕಾರದ | ಶೂರ ಸಿದ್ಧಿಗಳನು ಮಾಡುವವರಿಗೆ || ಘೋರರೂಪವಾದ ನರಕವು ತಪ್ಪದೆಂದು | ಧೀರವಾದ ಶ್ರುತಿಯು ಸಾರಿ ಕೂಗುತಿರಲು || ೧೦ || ಸಾಧನ ನಾಲ್ಕನು ಸಾಧಿಸಿ ಆತ್ಮಾನಾತ್ಮ | ಬೋಧವ ಕೇಳಿ ಶ್ರೀಗುರು ರಾಮಾರೂಢರ || ಬಾಧಕ ವಾಗದಾನಂದದ ಮರ್ಮವನು | ಸಾಧಿಸಿ ತಿಳಿಯದೆ ಬೇರೆ ಮಾರ್ಗದಿಂದ || ೧೧ ||

## ೩೪ ನೇ ಪದ.

( ದಾಟಿ—ತನ್ನ ತಾನರಿದೊಡೆ ಮುಕ್ತ ಎಂಬಂತೆ. )

ಜಯ ಜಯ ಮಂಗಲಂ ಭವತು | ಭವ | ಭಯವನು ನೀಗಿದಾತ್ಮಯೋಗಿಗೆ || ಪಲ್ಲ || ಎರಡೊಂದು ವರ್ಣದ ಮನುಗಳ | ಛಂದವ | ನರಿದು ಹರುಷದಿಂದ ಜಪವನೆಮಾಡಿ || ತ್ವರದಿ ಅವುಗಳ ರೂಪವನೆ | ಪೊಂದಿ | ಮೆರೆಯುವ ಪರಮಮಂತ್ರಯೋಗಿಗೆ || ೧ || ಬಿಂದುವಿನ ರಮ್ಯವಾದರೂ | ಪಿನೊಳ್ | ಚಂದದಿ ಅಸುಗೂಡಿ ಭೇದವಳಿದು || ಕುಂದದೆ ಮನವನಿರಿಸಿ | ಬಹು | ನಂದದಿ ಶೋಭಿಪ ಲಯಯೋಗಿಗೆ || ೨ || ಪರಮ ಅಷ್ಟಾಂಗಯೋಗದಿಂ | ಇಲ್ಲವೆ | ಬರಿಯ ಕುಂಭಕದಿಂದ ಮನವನು ಜಯಿಸಿ || ಪರಮಾನಂದ ಭರಿತ | ನಾಗಿ | ಧರೆಯೊಳು ಮೆರೆವ ಹಠಯೋಗಿಗೆ || ೩ || ವರಜ್ಞಾನ ದೃಷ್ಟಿಯು ಬಲಿದು | ಖೇದ | ಹರುಷವೆಂಬ ಭಾವವನು ಜರಿದು || ನಿರುತ ಬ್ರಹ್ಮಾನಂದದಲಿ | ಮನವ | ನಿರಿಸಿ ಮೆರೆಯುವ ರಾಜಯೋಗಿಗೆ ||೪|| ಗುರುಲಿಂಗದರ್ಶನೆಯನು | ಸಂಧಾನ | ವರವಿದ್ಯಾನವ ಭಕ್ತಿ ಸುವ್ರ

ತ ವೈದು || ನಿರುತದಿಂದಳವಟ್ಟು ಮೆರೆಯುವ | ಶ್ರೀಗುರು | ಪರಮಾ
ರೂಢ ರಾಮು ಶಿವಯೋಗಿಗೆ || ೫ ||

೩೫ ನೇ ಪದ.

( ದಾಟ—ಭ್ರಮರಾಂಬಾಮಾಂ ಪರಿಪಾಹಿ ಎಂಬಂತೆ. )

ಕರ್ಪೂರಾರುತಿ ಬೆಳಗಿರೋ | ಬೇಗ | ಸರ್ಪ ಭೂಷಣ ತ್ರಿಶೂ
ಲಧರಗೆ || ಪಲ್ಲ || ಅನುಪಮವೆಂಬ ಜಲದಿಮ | ಜ್ಜನಗೈ | ದನಾದಿ
ಯೆಂದೆಂಬ ಗಂಧವಧರಿಸಿ || ಅನಂತವೆಂಬ ಕುಸುಮದ | ಮಾಲೆ |
ಯನುಧರಿಸಿ ಅಖಂಡವೆಂಬುವ || ೧ || ಸದಮಳ ವೆಂಬುವವಸನ |
ಪೊದಿಸಿ | ಚಿದದ್ವಯವೆಂಬಾಭರಣ ಧರಿಸಿ || ಸದಾನಂದವೆಂಬಕ್ಷತೆ
ಯ | ನಿಟ್ಟು | ಮುದದಿ ರವಿಕೋಟಿ ಕಾಂತಿಯೆಂದೆಂಬ || ೨ || ನಿತ್ಯ
ವೆಂಬ ನೈವೇದ್ಯವ | ಮಾಡಿ | ಸತ್ಯವೆಂಬುವ ತಾಂಬೂಲವನಿತ್ತು |
ಅತ್ಯಧಿಕವೆಂಬ ವಂದನೆ | ಮಾಡಿ | ಸತ್ಯ ಶ್ರೀಗುರು ರಾಮಾರೂಢರ
ಕೂಡಿ || ೩ ||

ಶ್ರೀ ಮತ್ಸಚ್ಚಿದಾನಂದ ಸಂಯಮಿ ಶಿಖಾಮಣಿ ಶ್ರೀಯುತ ಪರಮ
ಹಂಸ ಸದ್ಗುರು ರಾಮಾರೂಢರ ಪೂಜ್ಯಪಾದ ಶಿಷ್ಯ ಶ್ರೀಗುರು
ಸಂಗಮೇಶ್ವರ ಕವಿಗಳಿಂದ ಮುಮುಕ್ಷು ಜನಹಿತಾರ್ಥ
ವಾಗಿ ವಿರಚಿಸಲ್ಪಟ್ಟ ಕೈವಲ್ಯ ಪದ್ಧತಿಯೊಳು ಯೋಗ
ಪ್ರತಿಪಾದನಸ್ಥಲ ಸಮಾಪ್ತ ಮಾದುದು ಇತಿ

ಶುಭಮಸ್ತು.



# ಶ್ರೀಮತ್ಸದ್ಗುರು ರಾಮಾರೂಢಾಯನಮಃ

# ಜ್ಞಾನಪ್ರತಿಪಾದನ ಸ್ಥಲಪ್ರಾರಂಭ.

## ೧ ನೇ ಪದ.

( ದಾಟಿ—ಇನ್ನಾದರೀಭವಕೆ ಹೇಸಬಾರದೆ ಮನುಜ ಎಂಬಂತೆ. )

ಶ್ರೀಗುರು ಮಹಾರಾಯಾ ಕಾಯೋನೀ ನಿಷ್ಕ್ರಿಯಾ | ಬೇಗ ದಿಂದೆನ್ನಮಾಯಾ ಪೋಗಿಸಿ ಸ್ಥಿರಕಾಯಾ || ಪಲ್ಲ || ತನುರತಿ ಭಾವ ವನೆರೆ ಪರಿಹರಿಸಿ | ಜಿನುಮಯಾತ್ಮನ ಭಾವವನು ಪಿಡಿಸಿ || ಅನವರ ತಾತ್ಮಾನು ಸಂಧಾನದಲಿರಿಸಿ | ಅನಘ ಮೂರ್ತಿಯೆ ನಿನ್ನಕರುಣ ದಿಂದೀಕ್ಷಿಸಿ || ೧ || ತ್ರಿಸಂದೇಹಗಳನೋರಂತೆ ಬಿತ್ತರಿಸಿ | ಹಸನಾಗಿ ಪಂಚಾವಸ್ಥೆಯ ಗುಟ್ಟನು ತಿಳಿಸಿ || ಅಸಮ ಫಾಲಲೋಚನೆ ಕರುಣ ದಿಂ | ಸುಶಾಂತಿಯನೆ ಬೀರಿ ಅನವರತೆನಗೆ || ೨ || ನೇತಿಗಳಿಸಿ ತೋ ರ್ಪ ವಸ್ತುಗಳನೆಲ್ಲವ | ನೋತು ಪಿಡಿಸಿ ಚಿದಖಂಡಾನುಭವವ || ಭೂತ ಭಾವಿಕಾದಿ ಪ್ರತಿ ಬಂಧವನಳಿಸಿ | ಪೂತನಿರ್ಮಲ ಗಾತ್ರ ಬಿಡಿ ಸೆನ್ನಯ ಭವವ || ೩ || ಸತ್ತು ಚಿತ್ತಾದಿ ಪಂಚಲಕ್ಷಣಗಳ | ಉತ್ತ ಮ ಮರ್ಮಗಳ ಶೀಘ್ರದಿಂ ಸೂಚಿಸಿ || ನಿತ್ಯಾತ್ಮನಲಿ ತನು ಪ್ರಾ ಣೇಂದ್ರಿ ಮನ ಬುದ್ಧಿ | ಚಿತ್ತಾದಿಗಳು ಅಧ್ಯಾಸವೆಂದು ತಿಳಿಸಿ || ೪ || ತತ್ತ್ವಮೆನಿಪ ವಾಕ್ಯದಿಂಗಿತವನು ನೆರೆ | ಸತ್ವರದಿಂದಲಿ ಬೋಧಿ ಸಿ ಮಗುಳೆ || ತತ್ವವೆತ್ತರ ಪ್ರಿಯ ಶ್ರೀರಾಮಾರೂಢನೆ | ನಿತ್ಯನಿಷ್ಕ್ರಿಯ ಪೂರ್ಣಾನಂದದೊಳ್ ನಿಲಿಸಿ || ೫ ||

## ೨ ನೇ ಪದ.

( ದಾಟಿ—ನೋಡಲಾಗದೆ ದೇವಾ ಎಂಬಂತೆ. )

ಅರಿದೊಡೆ ಮುಕ್ತಿ | ನರನೆ | ಅರಿದೊಡೆ ಮುಕ್ತಿ || ಪರಬ್ರ ಹ್ಮ ತತ್ವವನ್ನು | ನೆರೆ ಪರಕಿಸಿ ಮತಿಮುಟ್ಟಿ || ಪಲ್ಲ || ಎನ್ನಲಿತೋ ರ್ಪ ಪ್ರಪಂಚ | ಚನ್ನಾಗಿ ಆರೋಪವೆಂದು || ತನುತ್ರಯಗಳಿಗೆ ದೃ

ಷ್ಟಾ| ತ್ಮನು ನಾನೆಎಂದು ಭರದಿ||೧|| ಐದು ಕೋಶಾತೀತನೆಂದು || ಐದೆತ್ರ ಯಾವಸ್ಥೆಗಳಿಗೆ || ಸದಾಸಾಕ್ಷಿ ನಾನೆಂದು ಭ| ವದ ತೋರ್ಕೆ ಮಿಥ್ಯವೆಂದು || ೨ || ಆತ್ಮನ ವಿಶೇಷಣವನು ಆತ್ಮನ ಸತ್ತಾದಿಪದವ || ನೋತು ಯುಕ್ತಿಯಿಂದಲರಿದು | ಆತ್ಮನ ವಾಚ್ಯ ಸಿದ್ಧನೆಂದು || ೩ || ಪ್ರೀತಿಯಿಂ ಸಾಮಾನ್ಯ ವಿಶೇಷ | ಚೈತನ್ಯದ ಲಿಕ್ಷಣವನ್ನು ತತ್ತ್ವಂ ಪದಗಳ ವಾಚ್ಯಲಕ್ಷ್ಯ | ಮತ್ತೆರಡರೈಕ್ಯತೆಯ || ೪ || ಸಂಚಿತಾಗಾಮಿ ಕರ್ಮದಂಶ | ಸಚ್ಚರಿತನಿಗಿಲ್ಲವೆಂದು || ಹಂಚಿಕೆಯಿಂ ಸುಖೇಚ್ಛಾದಿ | ಸಂಚಯವನು ಭೂಮಿಕೆಯ || ೫ || ಜೀವನ್ಮುಕ್ತಿ ಸ್ವರೂಪವನು | ಪಾವನಾತ್ಮ ವಿದೇಹ ಮುಕ್ತಿ || ಭಾವನೆಯನಾರಬ್ಧಕರ್ಮ | ಜೀವನಿಗೆ | ಎಂದೋರಂತೆ || ೬ || ಸಕಲವೇದಾಂತ ಸಾರವ | ಅಕಲಂಕಾನುಭವವ || ವಿಕಲ್ಪರಹಿತಾರೂಢ ರಾಮು | ನಕಲಂಕಾನಂದ ಪದವ || ೭ ||

### ೩ ನೇ ಪದ.

( ದಾಟಿ—ಪ್ರಾಣಲಿಂಗವಿದನು ಗುರುವಿನಾಣತಿ ಎಂಬಂತೆ. )

ಹೇಗೆ ದೊರೆಯುವದು ಮುಕುತಿ | ಭೋಗದಾಶೆಯನ್ನು ಬಿಡದೆ || ಜಾಗರೂಕನಾಗಲಾರದೆ ಬೇಗಬ್ರಹ್ಮಾನಂದದೊಳ್ || ಪಲ್ಲ || ಅನುಬಂಧ ಚತುಷ್ಟಯನ್ನು | ಸಾಮಾನ್ಯ ವಿಶೇಷವೆಂದು | ಎನಿಸುವರಿಯಲಾರದೆ ಶ್ರೀಸದ್ಗುರುವರೇಣ್ಯನ || ಚಿನುಮಯ ಚರಣಗಳಿಗೆ ಬಿನದಿ ಮರೆಯ ಪೋಗಲಾರದೆ | ವಿನುತ ಶೇವಾದಿಗಳ ನಾಲ್ಕು ಜರಗಿಸದೆ ಸುಮ್ಮನೆ || ೧ || ದುರಿತ ವಿಷಯಗಳಲಿ ಮೋದ| ವಿರುವದೆಂಬ ಆಕ್ಷೇಪವು| ತ್ತರಗಳನೋ ತರಿಯಲಾರದ| ಧ್ಯಾಸಪಕ್ಷದಲಿ || ಪರಮ ಖ್ಯಾತಿಯಾದ ಐವರನುಮತಿಯ ತಿಳಿಯಲಾರದೆ| ಪರತರಾನಂದ ಪ್ರಾಪ್ತಿಗೆ ಕರ್ಮವಿಲ್ಲೆಂದರಿಯದೆ ||೨|| ನಾಲ್ಕುಚೇತನ ನಾಲ್ಕು ದೃಷ್ಟಾಂತವನರಿಯಲಾರದೆ | ಶೂಲಿ ನಾನುಎಂಬ ಜ್ಞಾನ ಆರಿಗೆಂದರಿಯದೆ || ನಾಲ್ಕು ಮೂರಾವಸ್ಥೆಯನು | ಪುಸಿಗಾಣದೆ ಮುಖ್ಯ ಬಾಧ | ಸಾಮಾನ್ಯಧಿಕರಣ ವರಿಯದೆ ಪ್ರತ್ಯಕ್ಷಾತ್ಮನ ಕಾಣದೆ || ೩ ||

ಭೇದವಾದ ವಿಸರ್ಜಿಸದೆ ಶಂಕರಮತವ ಪಿಡಿಯದೆ | ಬಾಧವೆಂದರಿ ಯದೆ ಘುಸಿರೋಗವು ಪುಸಿವೈದ್ಯನಿಂ || ಬಾಧಕಜಗವು ಯಾವಕ್ರಮ ದಿ ಮುದಿಸಿ ುವದೆಂದರಿಯದೆ | ವಾದಿಗಳನು ಮತಿಯನರಿಯದೆ ಪಂ ಚಕೋಶ ಚರ್ಚೆಯಲಿ || ೪ || ಕನಸು ಜಾಗ್ರತ್ತೈಕ್ಯ ಬೋಧದೊ ಳು ಪ್ರಶ್ನೋತ್ತರಗಳ | ಮನೀಷೆಯಿಂದರಿಯಲಾರದೆ ಚತುರ್ಮಹಾ ವಾಕ್ಯಗಳ || ಬಿನದಿವಾಚ್ಯ ಲಕ್ಷಾರ್ಥವನು ತಿಳಿದು ಸಮ್ಯಗಾಜ್ಞಾನಿ ಯಾಗಿ | ವಿನುತ ಶ್ರೀಸದ್ಗುರು ರಾಮಾರೂಢನಾಗಿ ಉಳಿಯದೆ ||೫||

೪ ನೇ ಪದ.

( ದಾಟಿ—ಉಪವನದ ಶೋಭೆಯ ನೀಕ್ಷಿಸಿ ಮನದಿ ಎಂಬಂತೆ. )

ಪಂಚವಿಧವೆನಿಪ ಗುರುಗಳ ಭೇದವ | ಹಂಚಿಕೆಯಿಂದರಿ ಮಾನವ || ಪಲ್ಲ || ತತ್ತ್ವೋಪದೇಶವ ಮಾಡಾತ್ಮವಸ್ತುವ | ಹಿತ ದಿಂದಲರುಹಿ ಭವವ || ಹತಮಾಡಿ ಪರಬ್ರಹ್ಮವಸ್ತುವನ್ನೀವಮಾ| ಡು ತಿರುವನೆ ದೇವಗುರುವವ || ೧ || ಜೀವದಮೇಲುಪೇಕ್ಷಿತನಾಗಿ ಶಿ ಷ್ಯರ | ನೋವಿತಾಡಿಸುತ ಮಗುಳೆ || ರಾವಣನಂತೆತಿಯಾಗಿ ರಾಕ್ಷಸಾ ಚಾರದ | ಭಾವನೆ ರಾಕ್ಷಸ ಗುರುವವ || ೨ || ಶಿಷ್ಯರ ನಿಂದೆಯನು ರೆ ಮಾಡುತಲ | ನಿಷ್ಟ ಶಾಸ್ತ್ರವನು ಪಠಿಸುತ || ನಿಷ್ಠುರ ವಾಣಿಯ ನ್ನಾಡುತಿರುವವನೆ | ದುಷ್ಟ ಪಿಶಾಚಗುರುವವ || ೩ || ಕ್ರೋಧ ಲೋಭ ಮೋಹ ಕಪಟ ಡಾಂಭಿಕನಾಗಿ | ಸಾಧಿಸಿ ಪುಸಿಯಾದ ಶಾ ಸ್ತ್ರವ || ಸಾದರದಿಂದಲಿ ಬೋಧವ ಮಾಡುತ | ಖೇದವ ನೀವನೆ ನರಗುರು || ೪ || ನಿರುತಹಂಕಾರದಿಂಪುಸಿ ನುಡಿ ನುಡಿಯುತ | ಪಿರಿ ಘು ವಿಷಯಾಸಕ್ತಿಯನಾಗಿ || ಗುರು ರಾಮಾರೂಢರ ಗುರ್ತರಿಯದೆ ಕಾಲಜ್ಞಾ| ನರವುವನೇ ಪಶುಗುರುವವ || ೫ ||

೫ ನೇ ಪದ.

( ದಾಟಿ—ಒಂದುದಿನ ಶುಕಯೋಗಿ ವಿನಯದಿ ಎಂಬಂತೆ. )

ಅಧಿಕಾರಿ ಲಕ್ಷಣವ ಪೇಳುವೆ | ಮುದದಿಂದ ನಾನಿಲ್ಲಿ ಕ್ರಮ

ದೊಳು | ಸದಮಲ ಪರಬ್ರಹ್ಮ ತತ್ವಾಪೇಕ್ಷೆಯಧಿಕಾರಿ || ಪಲ್ಲ || ಹೃದಯದೊಳು ವಿಷಯವನು ನೆನೆ| ಯದೆ ಪುಣ್ಯಕಾರ್ಯ ಮಾಡುತ | ಮುದವಿ ಸತ್ಯಾಸತ್ಯ ವಸ್ತುವನರಿಯಲಧಿಕಾರಿ | ಉದಿಸಿ ಈನರ ಜಲ್ಮದೊಳು | ಐದೆ ಕಳವಳಿಸುವನೆ ಅಧಿಕಾರಿ | ಪುದಿದು ತೋರುತಿರುವ ಸಂಸಾರವನು ನೆರೆನೋಡಿ || ೧ || ನಿರುತ ಮೂರು ಕರಣಗಳಲಿ | ದುರಿತ ಕರ್ಮವ ಜರಗಿಸದೆ | ಪಿರಿದು ಸುಕರ್ಮವನು ಜರಗಿಸುವನೆ ಅಧಿಕಾರಿ || ಗುರು ಹಿರಿಯರ ಪಾದಶೇವ ತ| ತ್ಪರನು ಸತಿಸುತಾದಿಗಳೊಳು | ನೆರೆ ಮಮಕಾರವನು ತ್ಯಜಿಸಿದವನೆ ಅಧಿಕಾರಿ || ೨ || ಸತತ ನಿದ್ರಾಲಸ್ಯರಹಿತನು | ಹತಿಸಿದವನು ಕಾಮಕ್ರೋಧವ | ಹಿತದಿ ಸತ್ಪುರುಷರುಕ್ತಿಯ ಕೇಳ್ವನಧಿಕಾರಿ || ಸತ್ಯಗತಿಯೆನಗೆಂತು ದೊರೆವುದು | ತತ್ವದಿರವೆನಗಾರು ಪೇಳ್ವರೆ| ನುತ್ತ ಶ್ರೀಗುರು ಮಾರ್ಗವನು ಚಿಂತಿಪನೆ ಅಧಿಕಾರಿ || ೩ || ಸುಜನ ಶಿರೋಮಣಿಯು ಎನಿಸಿ | ಕುಜನರ ಸಂಗವನು ದಾಂಟಿ | ಅಜಹರಿ ರುದ್ರರ ಪದವಿ ಮಿಥ್ಯವೆಂದರಿದು || ತ್ಯಜಿಸಿ ವಾಂಛೆಯ ಸರ್ವಭೋಗದ | ನಿಜಸುಖವನಾಲಂಬಿಸುವನೆ | ಗಜವು ಎಂದೆನಿಪನೆ ಶಾಂತಿಗುಣದಲಧಿಕಾರಿ || ೪ || ಮಲ ವಿಕ್ಷೇಪ ದೋಷರಹಿತನು | ಕುಲ ಛಲದಭಿಮಾನ ರಹಿತನು || ಸಲೆಸಾಧನ ಚತುಷ್ಟಯ ಗುಣಗಳ ಸಹಿತನು || ಸಲಲಿತಾಧಿಕಾರಿಯೆನಿಪನು | ಕಲುಷರಹಿತಾರೂಢ ರಾಮನ | ಮಲದ್ವಯ ನಿತ್ಯನಿಷ್ಠ್ರಿಯಾನಂದ ಬೋಧಕೆ || ೫ ||

## ೬ ನೇ ಪದ.

( ದಾಟಿ—ಮೃಡನಾಮ ರಾಮನು ಎಂಬಂತೆ. )

ಬೋಧಿಸಬಾರದು ಶಿಷ್ಯನಧಿಕಾರವ | ಶೋಧಿಸದೆ ಪರಮಾತತ್ವಜ್ಞಾನವನು || ಪಲ್ಲ || ಗುರು ವೇದಗಳಲಿ ಪರಮವಿಶ್ವಾಸ | ನಿರಹಂಕಾರ ವಿಷಯದೊಳು ದೋಷದೃಷ್ಟಿ || ಸ್ಥಿರಬುದ್ಧಿ ವಿನಯುವಚನ ಸುಚಾರಿತ್ರ | ಸೈರಣೆ ಮೊದಲಾದ ಗುಣವನೋಡದೆ || ೧ || ಪೂರ್ವಕಾಲದಲ್ ವಸಿಷ್ಠ ಮುನಿಯ ಬಳಿಯಲಿದ್ದ| ಮೂರುಕೋಟಿ ಶಿಷ್ಯರನು

ರಾಮಚಂದ್ರನು || ಓಂರತೆ ಪರೀಕ್ಷಿಸಲು ಕೆಲವರುತ್ತಮರು | ತೋರಿ ಸರ್ವರು ಕಪಟಿಗಳೇ ತೋರಿಲ್ಲವೆ || ೨ || ಜಲವಿಲ್ಲದ ಸ್ಥಲದಲ್ಲಿದ್ದ ವೃಕ್ಷವು | ಫಲಿಸದಂತೆ ಅನಧಿಕಾರಿಗಳಿಗೆ || ಕಲುಷರಹಿತಾರೂಢ ರಾಮನ ಸುಖರೂಪ | ಸಲಲಿತ ಜ್ಞಾನವ ಬೋಧಿಸಲ್ಫಲಿಸದು ||೩||

೭ ನೇ ಪದ.

( ದಾಟಿ — ಲಿಂಗಪೂಜೆಯ ಮಾಡಿರೊ ಎಂಬಂತೆ. )

ಎಷ್ಟು ವರ್ಣಿಸಲಿ ನಾನು | ಜ್ಞಾನದ ಮಹಿಮ | ಎಷ್ಟು ವರ್ಣಿಸಲಿ ನಾನು || ಪಲ್ಲ || ನಿಷ್ಠೆಯಿಂದಲೊಮ್ಮೆ ತಿಳಿದೊಡೆ ಇದನು | ದುಷ್ಟಭವದ ಮೂಲ ಪೆಸರಿಲ್ಲದಳಿವದು || ಅನುಪಲ್ಲ || ವರಗುರುವಿಗೆ ಶರಣು | ಪೋಗಿ ಉರು | ತರವಾದ ಭಕ್ತಿಯಿಂದ || ಕರುಣಕಟಾಕ್ಷವ ದೊರಕಿಸಲಿದರಿಂದ | ಶರೀರದಭಿಮಾನವುರೆಲಯಿಸುವದು || ೧ || ಮೂರು ಸಂಶಯಗಳಿ ದೋರಂತೆ ವಿ| ಚಾರಿಸಿ ತಿಳಿಯಲಿದನು || ಮೂರು ತಾಪಗಳು ಷಡೂರ್ಮಿ ಮನದ ವಿ| ಕಾರಗಳೆಲ್ಲವು ಇರದೆ ಪೋಗುವವು || ೨ || ಇಹಲೋಕ ಪರಲೋಕದೋ| ಳಾಜ್ಞಾನಕಿಂತ || ವಿಹಿತ ವಸ್ತುವೆ ಇಲ್ಲವು || ನಹಿಜ್ಞಾನೇನ ಸದೃಶವೆಂದು ಮಹಾ| ಮಹಿಮವಾದ ಸ್ಮೃತಿಸಾರಿ ಕೂಗುತಿರಲು || ೩ || ಸದಮಲ ಪರಿಪೂರ್ಣ | ನಿರ್ವಿಕೃತಿ | ಚಿದದ್ವಯ ಹರುಷ || ಪದವಾದ ಮೋಕ್ಷವು ಇದರಿಂದಲೊದಗುವ| ದಿದು ಸತ್ಯವು ಶ್ರುತಿಯೆ ಜ್ಞಾನಾತೆನಲಾಗಿ || ೪ || ಅಕಲಂಕವಾದೀ ಜ್ಞಾನ| ಜನಿಸಲು | ನಿಕರ ಪೋಗುವದು ಅಘದ || ವಿಕಲ್ಪರಹಿತ ಶ್ರೀ ಮದ್ರಾಮಾರೂಢರ| ಅಕಲಂಕಾನಂದವು ಪ್ರಾಪ್ತಿಯಾಗುವದು || ೫ ||

೮ ನೇ ಪದ.

( ದಾಟಿ—ಪಡಿವೆ ನೀನೆಂದಿಗೆ ಪರಮುಕ್ತಿಸುಖವನು ಎಂಬಂತೆ. )

ದೊರೆಯಲಾರದು ಮುಕ್ತಿ ಜ್ಞಾನದಿಂದಲ್ಲದೆ | ದುರಿತಕರ್ಮೋಪಾಸನೆಗಳಿಂದಲಿ || ಪಲ್ಲ || ಯಾವವಸ್ತುವಿನ ಅಜ್ಞಾನದಿಂದಲಿ | ಯಾ

ವದು ತೋರ್ಪುದೋ ಅದರ ಜ್ಞಾನದಿಂದ| ಓಂವಿನಾಶವಾಗುವದ ಲ್ಲದೆ ಬೇರೆ| ಯಾವ ಉಪಾಯದಿಂದಾಗದಿದು ನಿಜ ||೧|| ಬ್ರಹ್ಮದ ವಿಜ್ಞಾನದಿಂ ತೋರ್ಪಭವಭಯ | ಬ್ರಹ್ಮದ ಜ್ಞಾನದಿಂ ನಾಶವಾಗು ವದು || ಅಹಿ ಭೀತಿಯು ನೇಣಿನಜ್ಞಾನದಿಂದ | ಸಹಜವಾಗುರುಳಿ ಪೋಗುವ ಹಾಗೆ || ೨ || ಕರ್ಮದಿಂ ಪುಟ್ಟಿದ ಭವರೋಗ ಬಾಧೆಯು | ಕರ್ಮದಿಂದಲೆ ನಿವೃತ್ತಿಯಾಗದು || ಚರಣಕ್ಹತ್ತಿದ ಪಂಕ ತೊ ಳೆಯಬೇಕಾ| ದರೆ ಪಂಕದಿಂದ ತೊಳೆಯಲಳಿಯುವದೆ || ೩ || ವಿನು ತ ಉಪಾಸನೆಯಿದಾದರೂ ಸಹ | ಮನಸಿನ ಕರ್ಮವು ಎಂದೆನಿಸುವ ದು || ಅನಘ ಜ್ಞಾನ ಕರ್ಮವೆರಡು ಕಲೆಯವು | ಅನಲವಾರಿ ಪ್ರ ಕಾಶ ತಮದಂತೆ || ೪ || ಸನ್ನುತ ಶ್ರುತಿಯೆನೆ ಕರ್ಮಣಾಮೆನಲು| ಉನ್ನತ ಮೋಕ್ಷವು ಕರ್ಮದಿಂ ಲಭಿಸದು || ಸನ್ನುತ ರಾಮಾರೂ ಢರ ಕೃಪೆಯಿಂ ಶ್ರವಣ | ಚನ್ನಾಗಿ ಮನನಾದಿ ಆಗುವತನಕ || ೫ ||

## ೧೦ ನೇ ಪದ.

( ದಾಟಿ— ಭಾವಲಿಂಗದ ನಿಜವನು ಎಂಬಂತೆ. )

ಶ್ರವಣ ಮನನಾದಿ ಸಾಧನದಿಂದಲಿ | ತವಿಸುವವು ತೃತಿಯ ವಿಘ್ನಗಳು || ಪಲ್ಲ || ಶ್ರುತಿ ಷಡ್ಲಿಂಗ ಸಹಿತವಾಗಿ ಅತಿ | ಹಿತದಿಂ ಕೇಳ್ವದು ಶ್ರವಣ ವೆನಿಪುದು || ಹತವಾಗುವದಿದರಿಂ ಬ್ರಹ್ಮವಾ ನಲ್ಲವೆ| ನುತಿಗುವ ಅಸಂಭಾವನೆಯು ನಿಜ || ೧ || ಶ್ರುತಿ ಷಡ್ಲಿಂಗಸ ಹಿತವಾಗಿ ಕೇಳಿದ | ಹಿತತತ್ವವನೆ ಯುಕ್ತ್ಯನುಮಾನದಿಂ || ಸತತ ಚಿಂತಿಪುದೆ ಮನನ ವೆನಿಪುದು | ಹತವಾಗುವದಿದರಿಂ ಸಂಶಯ ಭಾವನೆ || ೨ || ಮನನಕೆ ಬಂದರ್ಥವನು ನಿಶ್ಚೈಸುವ| ದೆನಿಧಿ ಧ್ಯಾ ಸವೆ-ದೆನಿಸುವದಿದರಿಂ || ಚನ್ನಾಗಿ ಅಳಿದು ವಿಪರೀತ ಭಾವನೆ| ಸ ನ್ನುತಾರೂಢ ರಾಮನ ಸುಖವಹುದು || ೩ ||

## ೯ ನೇ ಪದ.

( ದಾಟಿ— ಇನ್ನಾದರೀಭವಕೆ ಹೇಸಬಾರದೆ ಮನುಜ| ಎಂಬಂತೆ. )

ಶ್ರುತಿ-ಷಡ್ಲಿಂಗ ತಾತ್ಪರ್ಯ ನಿರ್ಣಯವನಾ| ನತಿ ಮೋದದಿಂ

ಪೇಳ್ವೆನರಿಯೊ ನೀ ಮನುಜ || ಪಲ್ಲ || ಪ್ರಕರಣದ ಪ್ರಥಮ ಭಾಗ ದೊಳು || ಜಗವು ಸೃಷ್ಟಿಗಿಂ ಮೊದಲೀಸದ್ರೂಪ || ಅಕಲಂಕ ಬ್ರ ಹ್ಮವಾಗಿತ್ತೆಂದೊರೆಯುವದು | ಪಕ್ರಮವೆನ್ನಿಪುದು ವರಶ್ರುತಿಗಳಲಿ || ೧ || ಪ್ರಕರಣ ಸಮಾಪ್ತಿಯೊಳು ನಾಮ ರೂಪಾ| ತ್ಮಕ ಪ್ರಪಂಚ ಕೆ ಬ್ರಹ್ಮದೊಳು ಲಯವಂ || ಯುಕ್ತಿಯಿಂಪೇಳಿ ಪ್ರತ್ಯಗಾತ್ಮಕ್ಕೆ ಬ್ರಹ್ಮದೊಡ| ನೈಕ್ಯವಂ ಪೇಳುವದೇ ಉಪಸಂಹಾರವು || ೨ || ಅಕ ಲಂಕ ತತ್ವಮಸ್ಯಾದಿ ವಾಕ್ಯಗಳಿಂ | ಪ್ರಕರಣ ಮಧ್ಯದೊಳಾತ್ಮನೆ ಬ್ರಹ್ಮವೆಂದು || ಯುಕುತಿ ಅನುಮಾನಾದಿಗಳಿಂ ಮಗುಳೆ ಮಗುಳೆ| ಪ್ರಕಟಿಸಿ ಪೇಳುವದಭ್ಯಾಸ ವೆನಿಪುದು || ೩ || ಮೇಣು ಪ್ರತ್ಯಗಾ ತ್ಮನಿಗುಪನಿಷತ್ಪ್ರ| ಮಾಣವಲ್ಲದೆ ಅನ್ಯ ಪ್ರತ್ಯಕ್ಷಾದಿ || ಪ್ರಮಾಣಾತೀ ತತ್ವಮಂ ಪೇಳುತಲಿರುವದೆ | ಜಾಣತನದಿಂದ ಪೂರ್ವತೆಮೆನಿಪುದು || ೪ || ಸಕಲ ದೃಶ್ಯ ಪದಾರ್ಥಗಳ ಜಯವ| ನಕಲಂಕಾತ್ಮನರಿಯು ವದರಿಂದ ನಿ|| ರ್ವಿಕಲ್ಪ ನಿರ್ವಿಶೇಷಾನಂದವವನೆಂದು | ಯುಕುತಿ ಯಿಂ ಬೋಧಿಪುದೆ ಫಲವೆನಿಪುದು || ೫ || ಸಮಗ್ರ ಪ್ರಪಂಚದೊ ಳು ಬೆರೆಯದ |ವಿಮಲ ಬ್ರಹ್ಮವನು ನುತಿಸಿ ಕಾರಣಕಾರ್ಯ || ಸಮ ಗ್ರ ಪ್ರಪಂಚವ ತುಚ್ಛೀಕರಿಸುವದೆ| ಸುಮನದಿಂದಲಿ ಅರ್ಥವಾದ ವೆನಿ ಪುದು || ೬ || ಉನ್ನತ ಹೇಮಾಭರಣಗಳ ಓಲು | ಮಣ್ಣು ಕುಂಭಾ ದಿಯೋಲು ಸರ್ವ ಲೋಕಗಳನು || ಸನ್ನುತ ರಾಮಾರೂಢರ ಸ್ವ ರೂಪವೆಂದು || ಚನ್ನಾಗಿ ಪೇಳುವದು ಪಪತ್ತಿಯೆನಿಪುದು || ೭ ||

## ೧೧ ನೇ ಪದ.

( ದಾಟಿ—ಬೆರೆಯಬಾರದೆ ಮನುಜ ಎಂಬಂತೆ. )

ಮರುಳನಲ್ಲವೆ | ಇವನು | ಮರುಳನಲ್ಲವೆ | ಅರಿಯದೆ ಕ ರ್ಮವೆಂಬುದರರ್ಥ | ಬರಿದೆ ಜರಗಿಸುವನರನು || ಪಲ್ಲ || ವಿಚಾರಿ ಸದೆ ಕರ್ಮಾಕರ್ಮ |ಅಚಲ ಬ್ರಹ್ಮವಸ್ತುವನ್ನು || ಶುಚಿಭೂತನೆಂ ದು ಕರ್ಮ | ನಿಚಯಗಳನು ಮಾಳ್ಪನರನು || ೧ || ಕರ್ಮದಫಲವ

ಶೋಧಿಸದೆ | ಕರ್ಮಚಿತೋ ಲೋಕಃಕ್ಷೀಯತೆಂ|| ದೊರೆವ ಶ್ರುತಿ ಯಗಳನರಿಯದೆ | ನಿರುತಕರ್ಮ ಮಾಳ್ಪನರನು || ೨ || ಚತುರ್ವೇದ ಗಳಲಿರುವ | ಚತುರ್ಮಹಾ ವಾಕ್ಯದರ್ಥವ || ಮತಿಮುಟ್ಟಿ ತಿಳಿ ಯಲಾರದೆ | ಸತತ ಕರ್ಮ ಮಾಳ್ಪನರನು || ೩ || ಶ್ರುತಿಯೆದ್ವಿತಿಯಾ ದ್ವೈಭಯಂಭ| ವತಿಯೆಂದು ಕೂಗುತಿರಲು || ಹಿತದಿಕರ್ಮಮಾಡೆ ಭವದಿ | ಪತಿತನಾಗುವ ಮಾನವನು || ೪ || ಪರಮಶ್ರುತಿಯು ಪೊ ಗಳುತಿರುವ | ಪರಮಜ್ಞಾನವನ್ನು ಜರಿದು || ಜರಗಿಸಿ ಕರ್ಮ ರಾಮಾ ರೂ| ಢರ ಪದವನರಿಯದ ನರನು || ೫ ||

ಗ೨ ನೇ ಪದ.

[ ದಾಟಿ—ಯೋಗಿಯಲ್ಲವೆ ಗುಪ್ತ ಎಂಬಂತೆ. ]

ಎಂತುಮಾಳ್ಪನು | ಮನುಜ | ಎಂತು ಮಾಳ್ಪನು || ಅಂತರಾ ತ್ಮನರಿದಯೋಗಿ | ಚಿಂತೆಕೊಡುವ ಕರ್ಮವಿದನು || ಪಲ್ಲ || ಸಾರಭ್ಯ ರಿತ ಜ್ಞಾನವನ್ನು | ಪಾರಮಾರ್ಥ ತಿಳಿದಯೋಗಿ || ಘೋರದುಃಖ ಕೆ ಬೀಜವಾದ | ಘೋರದುರಿತ ಕರ್ಮವಿದನು || ೧ || ತಿಲಮಾತ್ರ ದುಃಖವನ್ನು | ಕಲುಷರಹಿತ ನೊಲ್ಲೆನೆಂಬ || ಸಲೆಬಾಧೆಗೊಳಿಪ ಕ ರ್ಮ | ಹಲವುಬಗೆಯಿಂದಲಿದನು || ೨ || ವೇದವು ತತ್ತ್ವಮಸಿಯೆಂ ದು | ಬೋಧಮಾಳ್ಪುದನ್ನು ತಿಳಿದು || ವಾದರಹಿತಾರೂಢ ರಾಮ ನು | ಭೇದಜನಿಪ ಕರ್ಮವಿದನು || ೩ ||

ಗ೩ ನೇ ಪದ.

[ ದಾಟಿ—ಪರತರ ಶಿವಲಿಂಗ ಎಂಬಂತೆ. ]

ಕರ್ಮದಫಲವೈದು ತೆರನಾಗಿಹುದದರ | ಮರ್ಮವನರುಪು ವೆನರಿಯೊನೀ ಮನುಜ || ಪಲ್ಲ || ಕುಲಾಲನ ಕರ್ಮದಿಂ ಘಟದುತ್ಪ ತ್ತಿಯು | ಕುಲಾಲನಿಗಾಗುವದು ಗಮನ ಕರ್ಮದಿಂ|| ದಲಿ ಪ್ರಾರ್ಥ ಸ್ಥನಿಗೆ ಪುರದಪ್ರಾಪ್ತಿಯು ತಾಡಿ| ಸಲು ದಂಡದಿಂ ಘಟವ ನಾಶ ವಾ ಗುವದು || ೧ || ಅನ್ನದ ವಿಕಾರವಾಗುವದು ಪಾಚಕನು | ಚನ್ನಾಗಿ ಪಾಕ ಕರ್ಮ ಮಾಡುವದರಿಂ || ಚನ್ನಾಗಿ ವಸ್ತ್ರವಕ್ಷಾಲನ ಮಾಡು

ವದರಿಂ | ದುನ್ನತ ಸಂಸ್ಕಾರವುಳಿವದು ಮಲ ಪೋಗಿ || ೨ || ಇಗು
ವಿಧಕರ್ಮದ ಫಲದೋಳ್ ಮುಮುಕ್ಷುವಿ | ಗೊಂದರ ಪ್ರಯೋಜ
ವಿಲ್ಲವೆಂತೆಂದೊಡೆ || ಅದ್ವಯ ಮೋಕ್ಷವು ಆತ್ಮನೊಳು ನಿರಂತರ| ಸಿ
ದ್ಧವಿರುವದರಿಂ ಸಂಭವಿಸದುತ್ಪತ್ತಿ || ೩ || ನಿತ್ಯ ಮುಕ್ತನಿರುವದರಿಂ
ದಲಾತ್ಮನು | ಸತ್ಯ ಮೋಕ್ಷ ಪ್ರಾಪ್ತಿ ಸಂಭವಿಸಲಾರದು || ಮತೆ
ಸಂಭವಿಸದು ನಾಶರೂಪ ಫಲ | ಮಿಥ್ಯವಾಗಿರಲು ಬಂಧವೇ ಮೋ
ಲಿಗೆ || ೪ || ವಿಕಾರ ಫಲವು ಸಹ ಸಂಭವಿಸದು ಅಕ| ಲಂಕಾತ್ಮನು
ಬಂಧರಹಿತನಿರುವದರಿಂ || ಸಂಸ್ಕಾರವು ಮೊದಲೇ ಇರುವದರಿಂದು
ತ್ತಮ | ಸಂಸ್ಕಾರದುಪಯೋಗವಿಲ್ಲ ಮುಮುಕ್ಷುವಿಗೆ || ೫ || ಕರ್ಮ
ದ ಫಲವು ಮೋಕ್ಷವೆಂದಂಗೀಕರಿಸ| ಲ್ಕೋರ್ಮೆಯು ಮನಿತ್ಯಕೃಷ್ಯಾ
ದಿ ಫಲದಂತೆ || ನಿರ್ಮಳ ಕ್ಷೇತ್ರ್ಯಾದಿಗಳುತ್ಪತ್ತಿಯಾದದ್ದು | ಕರ್ಮ
ದಿಂದಲಿ ನಾಶವೆಂದೊರೆಯುತಿರಲು || ೬ || ಇಂತು ಕರ್ಮದ ಫಲವ
ಮುಮುಕ್ಷುಗಳೋ| ರಂತೆ ತಿಳಿದು ಕರ್ಮಂ ಜರಿದು ಸುಚರ್ಚೆಯಿಂ ||
ಸಂತತ ಮಾಡಲಾರೂಢ ರಾಮನಾದಿ | ಅಂತ್ಯವಿಲ್ಲದ ಸುಖವು
ಪ್ರಾಪ್ತಿಯಾಗುವದು || ೭ ||

ಗಳನೇ ಪದ.

( ದಾಟಿ—ನೋಡಲಾಗದೆ ದೇವ ಎಂಬಂತೆ. )

ಕೂಡಲಾಗದೆ ಮನುಜ | ಕೂಡಲಾಗದೆ || ನಾಡೆ ಪರಮ
ಬ್ರೊಮ್ಮವನ್ನು | ನೋಡಿ ವರವಿಚಾರದೊಡನೆ || ಪಲ್ಲ || ಕಾಮ್ಯ
ಕರ್ಮವನ್ನು ಜರಿದು | ನೇಮದಿ ಸುವಿಚಾರ ಕರ್ಮಂ|| ಪ್ರೇಮದಿಂ
ದ ಜರಗಿಸುತ್ತ | ವ್ಯೋಮಾತೀತನಾದಾತ್ಮನ ||೧|| ಕ್ರೋಧ ಲೋ
ಭ ಮೋಹಗಳನು | ಬಾಧಿಸಿ ಸದ್ಭಾವದಿಂದ || ಶೋಧಿಸುತ ತ್ರಿಕಾಲ
ದೊಳು | ಬಾಧವಾಗದ ಬ್ರಹ್ಮವನು || ೨ || ಭೂರಿ ಅಷ್ಟಮದವ ತು
ಳಿದು | ಮೂರುವಾಸನೆಯನು ಕಳೆದು || ಪಾರಮಾರ್ಥ ನಿರ್ವಿಷ
ಯವ | ಸಾರತರ ಸ್ವಯಂತೇಜವ || ೩ || ಐದು ಭ್ರಮೆಯಗಳನು
ಅಳಿದು | ಐದೆ ಜ್ಞಾನಮದವ ಶೆಳೆದು || ಸದ ಸದ್ಭೇದವನರಿದು | ಸ

ದಮಲಾನಂದವನ್ನು || ೪ || ಭೇದ ಭಾವನೆಯನು ಜರಿದು | ಖೇದ ಹರುಷಗಳನು ಅಳಿದು || ಮೋದದಿಂದ ನಿತ್ಯಪರಿಪೂ | ರ್ಣಾದ್ವಯಾರೂಢ ರಾಮನ || ೫ ||

೧೫ ನೇ ಪದ.

( ದಾಟಿ—ಕೋಗಿಲೆಚಲ್ವ ಕೋಗಿಲೆ ಎಂಬಂತೆ. )

ಎಂತು ಪ್ರಾಪ್ತಿಯು ಬ್ರಹ್ಮಾನಂದವು | ಸಂತರ ಸಂಗವಿಲ್ಲದೆ || ಪಲ್ಲ || ಸತಿಸುತಾದಿಯೊಳು ಹಿತವ ತೆಗೆಯದೆ | ಮತಿವಂತರೊಳು ಪ್ರೀತಿಯನಿಡದೆ || ಅತಿಗತಮಾಯನ ಸತತಭಜಿಸದೆ | ಶ್ರುತಿಪಂಥವನು ಪಿಡಿಯದೆ || ೧ || ಕಾಮ-ಕ್ರೋಧಗಳ ನಾಶವ ಮಾಡದೆ | ಪ್ರೇಮದಿ ಸುಕರ್ಮ ಜರಗಿಸದೆ || ನೇಮದಿ ಚತುಸ್ಸಾಧನ ಯುಕ್ತನಾಗದೆ | ಕಾಮಿತ ದಾತನ ಸೇವಿಸದೆ || ೨ || ಶಿವ ಜೀವರೈಕ್ಯದ ಭಾವವಪಿಡಿಯದೆ | ಶ್ರವಣಾದಿ ಸಾಧನಕೂಡದೆ || ತವಿಸದೆ ಮೂರು ವಿಘ್ನಗಳೋರಂತೆ | ಭವದ ಪರಿಸೆರೆ ಹರಿಯದೆ || ೩ || ತೋರುವ ವಸ್ತುವು ನಷ್ಟವೆಂದರಿಯದೆ | ಸಾರಚಿನಮಯಾತ್ಮನ ಕೂಡದೆ || ಭೂರಿ ದೃಶ್ಯ ದೃಕ್ಕುಗಳ ಭೇದರಿಯದೆ | ಪಾರಮಾರ್ಥದೊಳ್ನಿಲ್ಲದೆ || ೪ || ಪರವಸ್ತುವಾನೆಂಬ ವೃತ್ತಿಯು ಲಯಿಸದೆ | ಹರುಷ ಖೇದಗಳಡಗದೆ || ಪರಮ ಶ್ರೀಸದ್ಗುರು ರಾಮಾರೂಢರ | ನಿರುಪಮಾನಂದ ಬೆರೆಯದೆ || ೫ ||

೧೬ ನೇ ಪದ.

[ ದಾಟಿ—ಆರೇನುಮಾಡುವರು ಆರಿಂದಲೇನಹುದು ಎಂಬಂತೆ. ]

ಪರಿಭವವ ನಶಿಸಲು ಏನಸಾಧ್ಯವು | ಗುರುಕರುಣ ಕಟಾಕ್ಷವಿರಲು ದುರಿತ || ಪಲ್ಲ || ಅತಃಕರಣವತಿ ಶುದ್ಧ ರೂಪವಾಗಿ | ಚಿತ್ತಿನ ಚಂಚಲವು ಪರಿಪಟ್ಟು ಪೋಗಿ || ಅತಃಕರಣದ ಸುಖದುಃಖಗಳು ಸಹನಾಗಿ | ಸಂತಜನ ಶಾಸ್ತ್ರದೋಳು ಶ್ರದ್ಧೆಯು ಇರಲು || ೧ || ಭೂತಕಾಲದ ಪುಣ್ಯ ಪ್ರಭಾವದಿಂವಲಿ | ಜಾತಿ ಸೂತಕರಹಿತ ಸದ್ಗು

ರುವ ಸಿಗಲು || ಪಾತಕವ ನಶಿಸುವ ಸ್ವಾತ್ಮಾನುಭವವ | ನೋತು ತಿಳಿದು ನಿಶ್ಚಯುವ ಮಾಡಲು || ೨ || ಶ್ರುತ್ಯಾದಿ ಸಮೂಹಗಳ ಸಮ್ಮತವಾಗಿ | ಮತ್ತೆ ಸ್ವಾನುಭವದನು ಸಾರವಾಗಿ || ತತ್ತ್ವಮಸಿ ಮೊದಲಾದ ಮಹಾ ವಾಕ್ಯಗಳ | ಉತ್ತಮ ಬೋಧವಾಗಲು ಗುರುವಿನಿಂದ || ೩ || ಕುಲಛಲದಭಿಮಾನವೋರಂತೆ ಲಯವಾಗಿ | ಸಲೆನಾಶವಾಗಿ ತ್ರಿ ಪ್ರತಿಬಂಧಗಳು || ಸಲಲಿತವಾದ ಬ್ರಹ್ಮಾತ್ಮೈಕ್ಯ ಜ್ಞಾನವು | ನಿಲಲು ಹೃದಯದೊಳು ಧೃಡತರವಾಗಿ || ೪ || ಇದಮಹಮೆಂಬ ಭಾವನೆಯು ಲಯವಾಗಿ ಫದಿದು ತೋರ್ಪ ಜಗವು ಬ್ರಹ್ಮವೆಂದರಿದು || ಸದಮಲ ಶ್ರೀ ರಾಮಾರೂಢರ ಕರುಣದಿಂ | ಮುದದಿ ಸವೆಯಲು ಜ್ಞಾನಫಲ ಚತುಷ್ಟಯ || ೫ ||

೧೭ ನೇ ಪದ.

( ದಾಟಿ—ಆಗದಾಗದು ಮುಕ್ತಿ ನಿಜಜ್ಞಾನವಿಲ್ಲದೆ ಎಂಬಂತೆ. )

ಸಹಜ ಪ್ರಾಪ್ತಿಯು ಮೋಕ್ಷಪದವಿಯು | ಅಹಮಾತ್ಮಾನೆಂಬ ವೃತ್ತಿಯು ಜನಿಸಲು || ಪಲ್ಲ || ಆಕಲಂಕ ಬ್ರಹ್ಮಾತ್ಮೈಕ್ಯ ಜ್ಞಾನವನು | ಯುಕುತಿ ಅನುಮಾನಾದಿಯಿಂ ತಿಳಿಯಲು || ನಿಕರವನರಿಯಲು ದೇಹದ ತತ್ವಗಳ | ಸಕಲ ತತ್ವಗಳ ಕಾರಣ ಶೋಧಿಸಲು || ೧ || ಐದು ಕೋಶಗಳಿಂ ಮುಚ್ಚಲ್ಪಟ್ಟಾತ್ಮನ | ಐದು ಕೋಶಗಳ ಶೀಳಿನೋಡಲು || ಸದಮಲೀಶನ ಸೃಷ್ಟಿ ಜೀವಸೃಷ್ಟಿಯನು | ಐದೆ ತಿಳಿದು ಜೀವಸೃಷ್ಟಿಯ ಬಿಡಲು || ೨ || ಶ್ರುತಿಶಿರದ ಮಹಾವಾಕ್ಯಗಳಿಂಗಿತವ | ಮತಿಮುಟ್ಟಿ ತಿಳಿದಾರೋಪಿತ ಜಗತ್ತಿನ || ಸ್ಥಿತಿಯನು ಜ್ಞಾನದಿಂ ನಿವೃತ್ತಿಯನು ಮಾಡಿ | ಸತತ ಶ್ರುತಿನುತ ಆತ್ಮನೋಳ್ ಬೆರೆಯಲು || ೩ || ಶರೀರದೊಳ ಹೊರಗುತೀವಿದ ಕೂಟಸ್ಥನ | ಸ್ವರೂಪವನರಿಯಲು ಆತ್ಮನೋರ್ವನೆಂದು || ಪರೋಕ್ಷ ಧ್ಯಾನವಳಿದ ಪರೋಕ್ಷ ಧ್ಯಾನಮಾಡಿ | ಪರಮಾತ್ಮನಿಂದನ್ಯವಿಲ್ಲೆಂದರಿಯಲು || ೪ || ಚಂದದಿ ತೋರ್ಪುದೆಲ್ಲ ನಾಟಕದರಚನೆ | ಯೆಂದರಿದು ಬ್ರಹ್ಮಾ

ನಂದದಂತಭ್ರೂತಾ|| ನಂದದ ಮರ್ಮವನು ತಿಳಿದು ಅಷ್ಟವಿಧ |ನಂದವ ಸವಿಯಲು ಶ್ರೀ ರಾಮಾರೂಢರ || ೫ ||

೧೮ ನೇ ಪದ.

( ದಾಟಿ—ಮೂರು ಕರ್ಮಗಳ ಬಾಧೆಯಿಲ್ಲವೊ ಮನುಜ ಎಂಬಂತೆ. )

ಐದು ಕೋಶಗಳು ಆತ್ಮನಲ್ಲವು ಮನುಜ | ಐದೆ ವಿವರಿಸಲು ಅಸತ್ಯ ಮಪ್ಪುದರಿಂ || ಪಲ್ಲ || ಅನ್ನರಸದಿಂ ಪುಟ್ಟಿ ಅನ್ನರಸದಿಂ ಬೆಳೆದು | ಅನ್ನಮಯ ಪೃಥ್ವಿಯಲಿ ಲೀನವಾಗುವದೆ || ಅನ್ನಮಯ ಕೋಶವಿದುವೆ ಜಾಗ್ರದೊಳಿರ್ದು | ಕನಸಿನೊಳಿಲ್ಲದರಿಮ ಸತ್ಯವಪ್ಪುದು || ೧ || ಐದು ಪ್ರಾಣಗಳೈದು ಕರ್ಮೇಂದ್ರಿಗಳು ಬೆ| ರೆದು ಪ್ರಾಣಮಯ ಕೋಶವೆನಿಸುವು || ಇದುವೆ ಮೂರಾವಸ್ಥೆಯಲಿರ್ದು ಚೇತನವಿ| ಲ್ಲದ ಕಾರಣ ಜಡವೆನಿಪ್ಪುದು ಮನುಜ || ೨ || ಐದುಜ್ಞಾನೇಂದ್ರಿ ಮನಗೂಡಿ ಪೆಸರುವ| ಡೆದಿಹುದು ಮನೋಮಯ ಕೋಶವೆಂದು || ಇದುವೆ ಕಾಮುಕ್ರೋಧಾದಿವೃತ್ತಿಯಿಂ ಕೂ| ಡಿದರಿಂ ವಿಕಾರ ರೂಪವೆನಿಪುದು || ೩ || ಐದು ಜ್ಞೇತನೇಂದ್ರಿ ಬುದ್ಧಿಕೂಡಿವೆನಿ| ಪುದು ವಿಜ್ಞಾನಮಯ ಕೋಶವೆಂದು|| ಇದು ಮಿಂಚಿನಂತೊಂದು ಕ್ಷಣಕೋರಿ ಅಡಗು| ವದರಿಂದಲೆ ಅಸತ್ಯ ವೆನಿಸುವದು || ೪ || ಮೂರುವೃತ್ತಿಸಾಪೇಕ್ಷಿಕ ವಾದುವೆ| ಭೂರಿ ಆನಂದಮಯ ಕೋಶವೆನಿಪುದು || ಪಾರಮಾರ್ಥ ರೂಪವಲ್ಲದರಿಂದಿನು ಧೀರ ಶ್ರೀರಾಮಾರೂಢರ ರೂಪೆನಿಸದು || ೫ ||

೧೯ ನೇ ಪದ.

( ದಾಟಿ—ನಿದ್ರಿಬಾರದಿದೆನ್ನ ಪರಿಭವ ದುಃಖಸ ಎಂಬಂತೆ. )

ಮೂರು ಅವಸ್ಥೆಯು ಲಕ್ಷಣವ ನಾನಿಲ್ಲಿ | ಸಾರಿಪೇಳುವೆ ಕೇಳಿ ತಿಳಿಯೊ ನೀ ಮನುಜ || ಪಲ್ಲ || ಚತುರ್ದಶ ತ್ರಿಪುಟಿ ಮೂಲಕವಾಗಿ ತೋ| ರುತಿರ್ಪ ವ್ಯವಹಾರವೆ ಜಾಗ್ರವೆನಿಪುದು || ಹಿತದಿದರೋಳ್ಭೋಗಿಸಲ್ಪಟ್ಟ ಪದಾರ್ಥಗಳ | ತತಿಯುದ ಪಡಿಬಿಂಬವೆ ಸ್ವಪ್ನವೆನಿ

ಪುದು || ೧ || ಸಕಲೇಂದ್ರಿ ಮನಬುದ್ಧಿ ಚಿತ್ತಹಂಕಾರಗಳ | ನಿಕರ ವೆಲ್ಲ ಲಯಿಸಿ ಮೂಲಾಜ್ಞಾನದೊಳು || ಅಕಲಂಕಾತ್ಮನನು ಪೊಂದಿ ಕೊಂಡು ಜೀವನು | ಸುಖಿಸುವದೆ ಸುಷುಪ್ತಾವಸ್ಥೆಯೆನಿಪುದು || ೨ || ಈ ತ್ರಯಾವಸ್ಥೆಗಳು ಒಂದರೊಳಗೊಂದಿಲ್ಲ | ವಾದಕಾರಣ ವ್ಯತಿರೇಕ ವೆನಿಪವು || ಈ ತ್ರಯಾವಸ್ಥೆಗಳಲಿರುತಿರುವದರಿಂದ ಆತ್ಮ | ನು ಅನ್ವಯರೂಪ ನೆನಿಸುವನು || ೩ || ಮೂರವಸ್ಥೆಗಳು ಭಿನ್ನಭಿನ್ನಾಗಿ ತೋರಲು | ಮೂರವಸ್ಥೆಗಳರಿವಾತ್ಮನು ಭಿನ್ನ ನಲ್ಲ | ಭೂರಿ ಘಟಾದಿಗಳು ಭಿನ್ನವಿರಲದರೊಳು | ತೋರುವಾಕಾಶವು ಭಿನ್ನವಲ್ಲದಂತೆ || ೪ || ಇಂತೀ ಅವಸ್ಥೆಯ ಲಕ್ಷಣವನರಿದುಳಿದು | ಸಂತೋಷದಿಂದಾತ್ಮ ಭಾವವ ಪಿಡಿದು ನಿ| ರಂತರ ಸ್ಥಿರವಾಗಲು ಶ್ರೀ ರಾಮಾರೂಢರ | ಸಂತಸವು ಪ್ರಾಪ್ತಿಯಾಗುವದು ಸಹಜವು || ೫ ||

## ೧೯ ನೇ ಪದ.

( ದಾಟಿ—ಲಿಂಗಪೂಜೆಯ ಮಾಡಿರೊ ಎಂಬಂತೆ )

ನಂಬು ನಂಬೆಲೋ ಮನುಜ | ಹಂಬಲಿಸುತ | ನಂಬು ನಂಬೆಲೊ ಮನುಜ || ಪಲ್ಲ || ಕುಂಭಿನಿಯೊಳಗೆ ನೀ ಭೇದವಾದವ ಬಿಟ್ಟು | ಇಂಬುಗೊಡುವ ಸುಖಕೆ ಪರವ: ಜ್ಞಾನವನು || ಅನುಪಲ್ಲ || ಜಪ ತಪವನು ತ್ಯಜಿಸಿ | ನಿಶ್ಶೇಷದಿಂ | ವಿಪರೀತ ಬಗೆಯನಳಿಸಿ || ಉಪನಿಷದ್ವಚನದಿಂ ಜೀವೇಶರೈಕ್ಯದ | ಉಪಮಾ ಮೀರಿದ ಮಹಾ ಬ್ರಹ್ಮಜ್ಞಾನವನು || ೧ || ನಿತ್ಯನೈಮಿತ್ತಿಕಾದಿ | ಕರ್ಮ:ವನ್ನು ಸತ್ಯವಾಗಿ ತಿಳಿಸಿ || ಅತ್ಯಂತ ಭಾವಾದಿ ನಾಲ್ಕು ರಹಿತವಾದ | ನಿತ್ಯಆತ ನೆನಾನೆಂಬ ಜ್ಞಾನವನು || ೨ || ತ್ರಿಪುಟ ಸಹಿತವಾಗಿ | ಜಗಗಿಸುತಿರುವ | ಉಪಾಸನೆಯನು ತೊರೆದು || ತ್ರಿಪುಟೆಯುಡಗಿದದ್ವಯಚಿದ್ಘನ ನಿತ್ಯಾ | ನುಪಮಾರೂಢ ಶ್ರೀರಾಮನ ಸುಖಬೀಜ || ೩ ||

## ೨೧ ನೇ ಪದ.

( ದಾಟಿ—ಪರತರ ಶಿವಲಿಂಗ ಎಂಬಂತೆ )

ಪರಬ್ರಹ್ಮವಸ್ತುವಿನ ಇರವ ಎಂತೆಂದೊಡೆ | ಅರುಪುವೆ ನರಿಯೊ ನೀ ನರನೆಕ್ಷಿಪ್ರಂ || ಪಲ್ಲ || ಮೊದಲೀ ಪ್ರಪಂಚವು ತೋರುವದಕಿಂತಲೂ | ಪುದಿದು ತೋರಡಗಿದ ಕಾಲದೊಳಗ್ಯಾವದು || ಐದೆ ತೋರುತಲಿರುವದದುವೆ ಪರಬ್ರಹ್ಮ | ವೆಂದೆನಿಸುವದು ಸತ್ಯಜ್ಞಾನಿಗಳಿಂದಲಿ || ೧ || ತರಣಿ ಚಂದ್ರನಲ ಹರಿಹರಾದಿಗಳು | ಪರಮ ಪ್ರಕಾಶದಿಂ ಪೊಳೆಯುವ ರಾವನ || ಪರತರ ಪ್ರಕಾಶದೊಳಗಿನೊಂದಾಂಶದಿಂ | ವರ ಜ್ಞಾನಿಗಳವಗೆ ಪರಬ್ರಹ್ಮನೆಂಬರು || ೨ || ಕ್ಷೀರದೊಳು ಘೃತವು ವ್ಯಾಪಕವಿರುವಂತೆ | ಚಾರು ಪದಿನಾಲ್ಕು ಭುವನದೊಳಗೆ ನೆರೆ || ಶೇರಿರುವ ವಸ್ತುವೆ ಪರಬ್ರಹ್ಮವೆನಿಪುದು | ಸಾರಭರಿತ ವಿಚಾರದಿಂದ ನೋಡಲು || ೩ || ಕ್ಷೀರಾರ್ಣವ ದೊಳಗೆ ಚರಿಪ ಜಲಚರಗಳು | ಕ್ಷೀರದಾಧಾರದೊಳು ಜೀವಿಸುವ ತೆರದಿ || ಭೂರಿ ಸುರ ನರರು ಜೀವಿಸುವ ರಾವನ | ಪಾರಸುಖ ಶರಧಿಯೋಳವನೆ ಪರಬ್ರಹ್ಮ || ೪ || ನಿರುಪಾಧಿ ನಿರ್ಗುಣ ನಿರಾಲಂಬ ನಿರುಪಮ | ನಿರವಧಿ ನಿಶ್ಚಲ ನಿರ್ವಿಕಾರ ನಿರ್ಮಲ || ನಿರತಿಶಯ ನಿರಂಜನಾನಂದೈಕ ರಸಪೂರ್ಣ | ಪರಮಾರೂಢ ಶ್ರೀಮದ್ರಾಮನೆ ಪರಬ್ರಹ್ಮ || ೫ ||

## ೨೨ ನೇ ಪದ.

( ದಾಟಿ—ನಂಬು ನಂಬಲೊ ಮನುಜ ಎಂಬಂತೆ )

ನೀನೆ ಪರಬ್ರಹ್ಮ ವಸ್ತು | ಹೇ ಮನುಜನೆ | ನೀನೆ ಪರಬ್ರಹ್ಮ ವಸ್ತು || ನೀನೆ ಅಕಲಂಕನು ನೀನೆ ನಿಷ್ಕ್ರಿಯನು | ನೀನೆ ಪರಮ ಶ್ರುತಿ ಸ್ಮೃತ್ಯಾತ್ಮರೂಪನು || ಪಲ್ಲ || ನೀನೆ ಸಚ್ಚಿದಾನಂದನು | ನೀನೆ ನಿತ್ಯ | ನೀನೆ ಪರಿಪೂರ್ಣ ರೂಪ || ನೀನೆ ನಿರ್ಗುಣವಂತ ನೀನೆ ಸದ್ಗುಣವಂತ | ನೀನೆ ನಿಸ್ಸಂಗಾತ್ಮಾ ನೀನೆ ಸಾಕ್ಷಿಯಾತ್ಮಾ || ೧ || ನೀನೆ ಸ್ವಯಂ ಪ್ರಕಾಶ | ನೀನೆ ಅಮಳ | ನೀನೆ ಕೂಟಸ್ಥರೂಪ || ನೀನೆ

ನಾಮರೂಪಕಾಧಾರ ಭೂತನು | ನೀನೆ ಮೊದಲು ಕಡೆರಹಿತನಾದ ವನು || ೨ || ನೀನೆ ನಿರಾಲಂಬನು | ನಿರ್ವಿಕಾರನು | ನೀನೆ ನಿರುಪ ಮ ರೂಪನು || ನೀನೆ ಮನವಾಣಿಗಳಿಗೆ ಮೀರಿದಾತಾ | ನೀನೆ ಸು ಖಾಬ್ಧಿ ಶ್ರೀರಾಮಾರೂಢರೂಪ || ೩ ||

## ೨೩ ನೇ ಪದ.

( ದಾಟಿ—ಇನ್ನಾದರೀ ಭವಕೆ ಹೇಸಬಾರದೆ ಮನುಜ ಎಂಬಂತೆ )

ಅತಿ ವಿಶದವಾಗಿ ಅರವುವೆನಾತ್ಮನ | ಮತಿಮುಟ್ಟಿ ತಿಳಿಯೊ ನೀ ಪಂಚಲಕ್ಷಣವ || ಪಲ್ಲ || ಭವಿಷ್ಯ ವರ್ತಮಾನಾದಿ ಕಾಲದೊ ಳು | ತವಿಸದರಿಂದಾತ್ಮನು ಸತ್ತೆನಿಸುವನು || ವಿವರಿಸಿ ನೋಡಲು ಸಕಲಕೆ ಅಧಿಷ್ಠಾ | ನವೆನಿಸುವದರಿಂ ಸತ್ತೆನಿಸುವನು || ೧ || ಪುದಿ ದು ತೋರುವ ಈ ತ್ರಯಾವಸ್ಥೆಯೊಳಗೆ | ಸದಾ ಇರುವದರಿಂ ಸತ್ತೆ ನಿಸುವನು || ಇದು ಒಂದೆ ಸತ್ತೆಯು ಉಪಾಧಿ ಭೇದದಿಂ | ದೈದೆ ತ್ರಿವಿಧರೂಪ ಸತ್ತೆನಿಸುವದು || ೨ || ದುರಿತ ಪ್ರಪಂಚವು ಮರಣ ಮೂರ್ಛಾದಿಯೊಳು | ಪೊರಗಿದ್ದು ತೋರಿದೆ ಜಾಗ್ರದಾವಸ್ಥೆಯೊಳು || ನೆರೆ ತೋರಿ ವಿದೇಹ ಮುಕ್ತಿಯೊಳ್ಸಮೂಲವಾ | ಗುರುಳಿ ಪೋ ಪುದರಿಂ ವ್ಯವಹಾರಿಕೆನಿಪುದು || ೩ || ಶುಕ್ತಿಕಾ ರಜತದ | ಸ್ವಪ್ನದ ವಿಷಯಾದಿ | ನಿಕರದ ಸತ್ತೆಯು ತೋರ್ಪಕಾಲದಲಿ ಅ || ಷ್ಟೆಕಾಣಿಸಿ ಕೊಂಡು ಮುಗುಳೆ ಕಾಣ್ಬವೇಳೆಯೊ | ಳಗಿಲ್ಲವಾದ್ದರಿಂ ಪ್ರಾತಿಭಾಸಿ ಕೆನಿಪುದು || ೪ || ಸಕಲ ಕಲ್ಪನೆಗೆ ಅಧಿಷ್ಠಾನಮಾಗಿ | ವಿಕರಿಸದ ಬ್ರಹ್ಮಸತ್ತೆಯೆನಿರುಪಮ || ಅಕಲಂಕಾರೂಢ ರಾಮನ ರೂಪೆನಿಸಿ ನಿ | ರ್ವಿಕಲ್ಪ ಪಾರಮಾರ್ಥಿಕ ಸತ್ತೆನಿಪುದು || ೫ ||

## ೨೪ ನೇ ಪದ.

( ದಾಟಿ—ಪಡೆವೆ ನೀನೆಂದಿಗೆ ಎಂಬಂತೆ )

ಅರವುವೆ ನಾನಿಲ್ಲಿ ಚಿತ್ತಿನ ಲಕ್ಷಣವ | ಹರುಷದಿಂದ ಕೇಳಿ ತಿಳಿಯೊ ನೀಮಾನವಾ || ಪಲ್ಲ || ಸಕಲಾವಸ್ಥೆಗಳೊಳು ವಿಷಯಾ

ದಿಗಳ | ನಿಕರವ ನಿರಂತರ ಇದಿರಿಟ್ಟು ಕಾಣುತ || ಸಕಲ ಕರಣೇಂ ದ್ರಿಯಿಂ ಗೋಚರವಾಗದ | ಅಕಲಂಕ ಸ್ವಯಂ ಪ್ರಕಾಶವೆ ಚಿದ್ರೂಪ ||೧|| ಒಂದೆ ಆಕಾಶವು ಬೇರೆ ಬೇರುಪಾಧಿ | ಯಿಂದಲಿ ಜಲ ಮೇಘ ಘಟಮಹಾಕಾಶ | ವೆಂದೆನಿಸುವ ತೆರದೀ ಚಿತ್ತವೆ ಉಪಾಧಿ | ಯಿಂದ ಜೀವೇಶ ಕೂಟಸ್ಥ ಬ್ರಹ್ಮವೆನಿಪುದು ||೨|| ತನುತ್ರಯ ನಾನೆಂಬಹಂಕಾರದಲಿ ಚೇ | ತನದ ಪ್ರತಿಬಿಂಬವೆ ಜೀವವೆನಿಪುದು || ವಿನುತ ಈಶ್ವರನೆನಿಸುವದು ಮಾಯೆಯೊಳು | ಅನವರತ ಪ್ರತಿಫಲಿಸಿದ ಚೈತನ್ಯ ||೩|| ಬುದ್ಧಿಯ ಕಾರ್ಯಕೆ ಸಾಕ್ಷಿಯೆಂದೆನಿಸಿದ | ಶುದ್ಧಚೈತನ್ಯವೆ ಕೂಟಸ್ಥವೆನಿಪುದು || ಹದ್ನಾಲ್ಕು ಲೋಕಗಳೊಳಹೊರಗು ತುಂಬಿ | ಅದ್ವಯ ಚೇತನವೆ ಬ್ರಹ್ಮವೆನಿಪುದು ||೪|| ಇಂತು ಚೈತನ್ಯದಲಕ್ಷಣವರಿದೊಡೆ | ಅಂತ್ಯೆ ಆಗುವನರನೋರಂತೆ ವಿವರಿಸಿ || ಅಂತ ರಹಿತ ನಿರುಪಮ ಚರಿತ್ರೆಯುಳ್ಳ | ಕಂತುಹರ ಶ್ರೀರಾಮಾರೂಢರ ದಯದಿಂ ||೫||

### ೨೫ ನೇ ಪದ.

( ದಾಟಿ—ಪಡೆವೆ ನೀನೆಂದಿಗೆ ಎಂಬಂತೆ )

ಆನಂದವೆಂಬುದರ ಲಕ್ಷಣವೆಂತೆನಲು | ಜಾನಿಸಿ ಅರವುವೆ ತವಕದಿಂದಲಿನಾ || ಪಲ್ಲ || ಪರತರ ಮೋದಕೆ ವಿಷಯವೆನಿಸುವದೆ | ಹರುಷವೆನಿಪುದಿದನ್ಯೋನ್ಯುಪಾಧಿಯಿಂ || ದರಿಯಲಷ್ಟವಿಧಾನಂದವೆನಿಸಿಹುದು | ನೆರೆ ಜಲದ ಸ್ವಾದನ ಭವರವವಂತೆ ||೧|| ಸತಿಸುತಾದಿ ವಿಷಯಂಗಳು ದೊರಕಿದ | ಲಿತೋರ್ಪುದೆ ವಿಷಯಾನಂದವೆನಿಪುದು || ಮತಿವಂತರರಿಯಲು ಸುಪ್ತಿಯೊಳ್ತೋರ್ಪುದೆ | ಅತಿಹಿತಕರ ಬ್ರಹ್ಮಾನಂದವೆನಿಪುದು ||೨|| ನಿದ್ರೆ ಅರಿದಾಕ್ಷಣದೋಳ್ತೋರ್ಪುದೆ ವಾಸನಾ | ನಂದವೆನಿಪುದು ಲಾಭಾಲಾಭಮ || ಲ್ಲದುಪೇಕ್ಷಾ ಬುದ್ಧಿಯಲ್ಲಿ ತೋರ್ಪುದೆ ಮುಖ್ಯಾ | ನಂದವೆನಿಸುವದು ಜ್ಞಾನವಂತರಿಗೆ ||೩|| ಯೋಗಾಭ್ಯಾಸದಿಂ ಮನೋನಾಶವದರಲಿ |

ಬೇಗದಿಂ ತೋರ್ಪುದೆ ನಿಜಾನಂದವೆನಿಪುದು || ಭೋಗದೊಳಗೆ ತಾನೇ ಪ್ರಿಯತಮನೆಂದು | ಜಾಗ್ರದಿಂ ತೋರುವದೆ ಆತ್ಮಾನಂದವು || ೪ || ತೋರುದೆಲ್ಲವು ಮಿಥ್ಯತಾನೆಸತ್ತ್ಯೆಂಬ ವಿ | ಚಾರದಲಿ ತೋರ್ಪುದದ್ವೈತಾನಂದವು || ಶ್ರೀರಾಮಾರೂಢರ ಬೋಧದಿಂಜನಿಸಿದ | ಧೀರಜ್ಞಾನದೊಳ್ತೋರ್ಪುದದ್ವಿದ್ಯಾನಂದ || ೫ ||

೨೬ ನೇ ಪದ.

( ದಾಟಿ— ವನಿತೆಯುರೊಲವಾವನೆಲೆ ಎಂಬಂತೆ )

ನಿತ್ಯ ಲಕ್ಷಣದ ಮರ್ಮವನು ಪೇಳುವೆ | ಅತ್ಯಂತಾನಂದವು ದೊರೆಯುವದಿದರಿಂ || ಪ || ಚತುಷ್ಟಿ ಅಭಾವ ರಹಿತವೆನಿಪುದೆ | ಯತಿನುತಶೀಲರಿಂ ನಿತ್ಯವೆನಿಪುದು || ಚತುಷ್ಟಿ ಅಭಾವದಿಂಗಿತವೆಂತೆಂದೊಡೆ | ಅತಿಹಿತದಿಂದಲಿ ಪೇಳುವೆ ನಾನಿಲ್ಲಿ || ೧ || ಮೃತ್ತಿಕೆಯೊಳು ಘಟವೊದಲಿಲ್ಲದಿರುವದೆ | ಉತ್ತಮ ಜ್ಞಾನಿಗಳಿಂ ಪ್ರಾಕಾಭಾವೆನಿಪುದು || ಮೃತ್ತಿಕೆಯೊಳು ಘಟ ಉದಿಸಿ ನಾಶವಾದ | ನಂತರ ತೋರುವದೆ ಪ್ರಧ್ವಂಸಾಭಾವವು || ೨ || ಘಟದೊಳು ಪಟವು ಪಟದೊಳು ಘಟವು | ಸಟೆಯಾಗಿರುವದೆ ಅನ್ಯೋನ್ಯಾಭಾವವು || ಘಟವು ಮೃತ್ತಿಕೆಯೊಳು ತ್ರಿಕಾಲದಲ್ಲಿಯೂ | ಧಿಟವಿಲ್ಲದಿರುವದೆ ಅತ್ಯಂತಾಭಾವವು || ೩ || ಭೂರಿ ಅನಿತ್ಯವೆನಿಸುವದೀ ಜಗವು | ಮೂರೊಂದಭಾವದಿಂದಲಿ ಕೂಡಿದ್ದರಿಂ || ಪಾರಮಾರ್ಥ ಬ್ರಹ್ಮವಿದರಾದ ಜ್ಞಾನಿಗ | ಳೋರಂತೆ ವಿವರಿಸಿ ಅರಿದು ನೋಡಲು || ೪ || ನಿತ್ಯದ ಮರ್ಮವನು ತಿಳಿದಿಂತು ನೀನು | ನಿತ್ಯಾತ್ಮ ನಾನೆಂಬ ಬಗೆಯಿರಲು ಸತತ || ನಿತ್ಯಸ್ವರೂಪ ಶ್ರೀರಾಮಾರೂಢರ ಸುಖವ | ನಿತ್ಯಬೆರೆಯುವನು ಭೃಂಗಿ ಕೀಟದಂತೆ || ೫ ||

೨೭ ನೇ ಪದ.

( ದಾಟಿ— ನಿದ್ರೆ ಬಾರದಿದೆನ್ನ ಪರಿಭವ ದು:ಖಸ ಎಂಬಂತೆ )

ಪರಪೂರ್ಣ ಲಕ್ಷಣವನರುಪುವೆ ನಾನಿಲ್ಲಿ | ಅರಿತವನಿದನು ಪರಿ

ಪೂರ್ಣ ಬ್ರಹ್ಮನು || ಪಲ್ಲ || ಪರಿಚ್ಛೇದ ತ್ರಯದಿಂದ ರಹಿತವಾದುದೆ | ಪರಿಪೂರ್ಣ ವಸ್ತುವಿನ ಲಕ್ಷಣವಹುದು || ಪರಿಚ್ಛೇದ ತ್ರಯದ ಉದ್ದೇಶ ಲಕ್ಷಣವನು | ಅರಪುವೆ ಸುಜ್ಞಾನಿಗಳ ಸಮ್ಮತದಿಂದ ||೧|| ಒಂದು ಕಾಲದೊಳಿರ್ದು ಇಲ್ಲದ್ವಸ್ತುವು ಮ | ತ್ತೊಂದು ಕಾಲದೊಳು ಕಾಲಪರಿಚ್ಛೇದ || ಒಂದು ದೇಶದೊಳಿರ್ದು ಇಲ್ಲದ್ವಸ್ತು ಮ | ತ್ತೊಂದು ದೇಶದೊಳು ದೇಶಪರಿಚ್ಛೇದ || ೨ || ಸಜಾತಿ ವಿಜಾತಿ ಸ್ವಗತ ಭೇದಗಳಿಂ | ನಿಜವಾಗಿ ಕೂಡಿಕೊಂಡಿರುವ ವಸ್ತುವೆ || ಅಜ ಹರಿ ರುದ್ರರಿಂನುತಿಪ ಶ್ರುತಿಗಳ | ನಿಜವಾಕ್ಯದಿಂದದು ವಸ್ತು ಪರಿಚ್ಛೇದ || ೩ || ಒಂದಾಮ್ರವೃಕ್ಷದಿಂ ಮತ್ತೊಂದಾಮ್ರವೃಕ್ಷ | ವಂದದಿಂದಲಿ ಸಜಾತಿ ಭೇದವೆನಿಪುದು || ಮತ್ತದೇ ಆಮ್ರವೃಕ್ಷದಿಂ ಪಾಷಾಣಗಳು | ಕುಂದದೆ ವಿಜಾತಿ ಭೇದವೆನಿಸುವವು || ೪ || ಶೋಧಿಸಲದೇ ಆಮ್ರವೃಕ್ಷದೊಳಗಿನ ಶಾ | ಖಾದಿಗಳ ಭೇದವು ಸ್ವಗತವೆನಿಪವು || ವಾದರಹಿತಾ ರೂಢ ಶ್ರೀಗುರು ರಾಮನೀ | ಭೇದತ್ರಯದಿಂದ ರಹಿತನೆನಿಪನು || ೫ ||

## ೫೮ ನೇ ಪದ.

( ದಾಟಿ—ಶ್ರೀಗುರುವಚನುಪದೇಶವ ನಾಲಿಸಿದಾ ಎಂಬಂತೆ )

ತನ್ನ ಭಾವವೆ ಜಗವಲ್ಲದೆ ಬೇರಿಲ್ಲ | ಉನ್ನತ ವಿಚಾರದಿಂದರಿದು ನೋಡಲು || ಪಲ್ಲ || ಶಿಸುವಿಗೆ ಗಿಡದ ಗಜವು ನಿಜವೆಂದೆ | ನಿಸಿದ ಪರಿ ತನ್ನ ಬಗೆಯಿಂದಲೀ ಜಗವು || ನಿಶ್ಚಯವಾಗಿ ತೋರುವ ನಿಜವಾದ | ವಸ್ತುವ ಸರಿಯಲು ಪುಸಿದೋರುವದು || ೧ || ಕನಸಿಕು ತೋರ್ಪುದು ಜಾಗ್ರವಾಗದ | ಮುನ್ನವದರಂತೆ ಪಂಚಕೋಶ ಶೀತ || ಉನ್ನತವಾದರುವಿನ ಜ್ಞಾನವಾಗದ | ಮುನ್ನವೆ ನಿಜವಾ ತೋರ್ಪುದೀಜಗವು || ೨ || ಮೃತ್ತಿಕಯೊಳವಿಚಾರದಿಂದಲಿ ನಾನ | ಚಿತ್ರದ ಮೂರ್ತಿಗಳು ನಿಜವಾದ ಪರಿ || ಸತ್ತುಚಿತ್ತು ಸುಖರೂ ನಾದಾತ್ಮನೊಳ್ ಸತ್ಯವೆನಿಸಿಹವು ಸರ್ವ ಲೋಕಗಳು || ೩ || ಪ ಬ್ರಹ್ಮ ವಸ್ತುವೆ ಜಗವಾಗಿ ತೋರ್ಪುದು | ಮರವಿಯಿಂದಲಿ ವಿವೇ

ದಿಂದಲಿ || ಪರಬ್ರಹ್ಮವೇ ತೋರುವದು ಪೊನ್ನಿನೊಳ | ಗಿರುವ ನಾನಾವಿಧಾಭರಣಗಳಂತೆ || ೪ || ವರ ಶ್ರುತ್ಯಾದಿಗಳು ದೃಷ್ಟಿಸೃಷ್ಟಿ ಯೆಂದು | ಒರೆಯಲು ತನ್ನ ಬಗೆಯೆ ಜಗವಹುದು || ಪರತರ ಸು ಜ್ಞಾನ ದೃಷ್ಟಿಯಿಂ ನೋಡಲೆಲ್ಲ | ಗುರು ರಾಮಾರೂಢರ ಸ್ವರೂಪ ವಹುದು || ೫ ||

೨೯ ನೇ ಪದ.

( ದಾಟಿ — ಸಹಜ ಬೋಧೆಯು ಸಮನಿಪುದೆ ಎಂಬಂತೆ. )

ಏನೊಂದು ಕಾರಣವಿಲ್ಲದೆ ರಾಜಿಪುದು | ಜ್ಞಾನವಂತರರಿದು ನೋಡಲೀ ಜಗವು || ಪಲ್ಲ || ಸಾರತರ ಬ್ರಹ್ಮವಸ್ತುವು ಜಗತ್ತಿಗೆ | ಕಾರಣವೆಂದೆನಲಾ ಬ್ರಹ್ಮವಸ್ತುವು ವಿ || ಕಾರವನು ದಳೆಯಿತಾಗಿ ಕಾರಣವಲ್ಲ | ಪಾರಮಾರ್ಥ ಜ್ಞಾನದಿಂದರಿದು ನೋಡಲು || ೧ || ಅಜ್ಞಾನವು ಜಗಕೆ ಕಾರಣವೆಂದೆನಲು | ಸುಜ್ಞಾನ ಸ್ವರೂಪನಾದಾ ತ್ಮನೋಳ್ಕೊದಲಿಗೆ || ಅಜ್ಞಾನವಿಲ್ಲದರಿಂ ಕಾರಣವೆನಿಸದು | ಸುಜ್ಞಾ ನಿ ಜನಸಮೂಹ ಸಮ್ಮತದಿಂದ || ೨ || ಈಶನೀ ಜಗವನು ಸೃಜಿ ಸುವನೆನಲು | ಈಶನು ಸದಾ ತೋರುತಿಹನಾಗಿ ಜಗಕೆ || ನಾಶವಿ ಲ್ಲಾಗಲು ಮೋಕ್ಷವನುಸುರುವ | ಶಾಸ್ತ್ರಗಳೆಲ್ಲವು ಪುಸಿಯಾಗುವವು || ೩ || ಜಗತ್ತಿಗೆ ಜಗವು ಕಾರಣವೆಂದೆನಲೊ | ದಗುವ ವಾಗಳೆ ಆತ್ಮಾಶ್ರಯಾದಿದೋ || ಷಗಳಾದ್ದರಿಂದಿದಕೆ ಕಾರಣವಿಲ್ಲೆಂಬುದು | ನಿಗಮಾಗಮ ಸ್ಮೃತ್ಯರನುಭವ ಸಿದ್ಧ || ೪ || ಒಂದು ಕಾರ್ಯವು ತ್ರಿ ಕಾರಣವಿಲ್ಲದಾಗ | ದೊಂದು ಕಾರಣವಿಲ್ಲದಾಶ್ಚರ್ಯಕರವಾಗಿ | ಅಂದವಲ್ಲದೆ ತೋರ್ಪೀಜಗದ ಮರ್ಮವನು | ಇಂದು ಪ್ರಭಾರೂಢ ರಾಮನೋರ್ವನೆ ಬಲ್ಲ || ೫ ||

೩೦ ನೇ ಪದ.

( ದಾಟಿ — ಮೂರವಸ್ಥೆಯ ಲಕ್ಷಣದ ಎಂಬಂತೆ. )

ಮಾಯಯೆಂಬುವ ಗುತ್ತು ಅರಿಯದಲೆ ನರರು | ನೋಯು ವರು ಭವತರಧಿಯೊಳಗೆ ಶಿಲುಕಿ || ಪಲ್ಲ || ಪರಿಕಿಸಿ ನೋಡಲ

ಮಾಯೆಯನು ಸಾವಯವ | ನಿರವಯವಾದಿಯಿಂ ಸ್ಥಾಣು ಪುರುಷನಂತೆ || ಅರುಪಲಾಗದು ಭಿನ್ನಾಭಿನ್ನಾದಿ ರೂಪಿಂದ | ಶರಧಿಯೊಳಗಿನ ತೆರೆನೊರೆಯಂತದನು || ೧ || ಅರುಪಲಾಗದು ಸತ್ಯಾಸತ್ಯಾದಿಯಿಂದದನು | ಮರುಚಿಕೆಯ ಜಲದಂತೆ ಮಾಯೆಯು ಮತ್ತೆ || ಅರುಪಲಾಗದು ಗಗನ ವರ್ಣದಂತೆ ರಜ್ಜು | ಉರಗದಂತೆ ಕನಸಿನ ಚಯದಂತೆ || ೨ || ಪರಮಬುದ್ಧಿಯಿಂದ ವಿವರಿಸಿ ನೋಡಲು | ಸರಸದಿಂದಾ ಮಾಯೆಯಿಲ್ಲೆಂಬುದು ಸಿದ್ಧ || ವರಶ್ರುತಿಯು ಯಾ ಮಾಯಾ ಸಾವಯವೆಂದು | ಒರೆಯಲು ಕೂಗಿ ಇನ್ನೇನು ಪೇಳುವದು || ೩ || ಶರೀರವಾನೆಂಬುದೆ ಹಿರಿಮಾಯೆ ಜ್ಞಾನಿಯೊಳು | ಬರಿದೆ ವಾದಿಸುದೆ ಕಿರಿಮಾಯೆಯೆಂದು || ಅರಿವಿನಿಂದನ್ಯವೇ ನಿಲ್ಲೆಂದರಿಯಲು | ಬರಿಯ ಮಾಯವೆಂದು ಶಾಸ್ತ್ರವೊರೆಯಿಲು || ೪ || ಪರಿಕಿಸದೆ ಮಾಯೆಯ ಲಕ್ಷಣವನಿಂತೀಪರಿ | ಬರಿಯ ಭ್ರಮೆಯೊಳಗೆ ಶಿಲುಕಿ || ಗುರು ರಾಮಾರೂಢರ ಚರಣಕೆ ದೂರಾಗಿ | ಜರೆಮೃತಿಯ ಕಷ್ಟಕೀಡಾಗಿ ನಿಲ್ಲುವರು | ೫ ||

೩೧ ನೇ ಪದ.

( ದಾಟ—ಜಾತಿಸೂತಕವೆಂಬ ಮಾತಿಲ್ಲವೆಂಬಂತೆ. )

ಶಂಕರ ಬ್ರಹ್ಮನತ್ವ ನಾನೆಂಬ | ಭಾವನೆಯು ಧೃಡ | ತರವಾಗಿ ನಿಲ್ಲಲು ಮುಕ್ತಿ || ಪಲ್ಲ || ಶರೀರದೊಳಗಿನ ತತ್ವಗಳನೆಲ್ಲ | ಪರಿಪರಿ ಬಗೆಯಿಂದ ಶೋಧಿಸಿ | ತ್ವರದಿ ಅವುಗಳನಳಿದು ಮುಂದೆ | ಬರುವ ಸಂಶಯ ಮೂರನಳಿದು || ಅನುಪಲ್ಲ || ಪಂಚಮಹಾಭೂತಗಳಿಂದ | ಉತ್ಪತ್ತಿಯಾದ | ಪಂಚವಿಂಶತಿ ತತ್ವಗಳನು || ಹಂಚಿಕೆಯಿಂ ಬಿಟ್ಟಿಡಿಸಿ ಬೇಗ | ಪಂಚಮಹಾಭೂತಕರ್ಪಿಸಿ || ವಂಚನೆಯು ನೆರೆಪೋಗಿ ದೇಹದ | ಚಂಚಲವನು ನೀಗಿಮನದ || ೧ || ಮಾಯೆ ಮೂರುವನ್ನು ತಿಳಿದು | ಜಾಗ್ರತೆಯಿಂದ ಮಾಯಗುಣಗಳನ್ನು ಕಳೆದು || ಕಾಯ ಕರಣಗಳ ಸಮು | ದಾಯಕೆನಾ ಸಾಕ್ಷಿಯೆಂದು || ಮಾಯೆಯ ಲಕ್ಷಣವನ್ನು ನೀಗಿ | ಶ್ರೇಯಾನಂದದೊಳು ಮುಳುಗಿ || ೨ || ಪ

ಮೇಶ ಜೀವಪದಗಳ | ಇರವನ್ನು ತಿಳಿದು | ಎರಡರೈಕ್ಯತೆಯುದಳಿದು || ದುರಿತ ವಿಪ್ರತಿಪತ್ತಿಯೊಗೆಯದೆ| ನಿರುತ ದೃಢದಿ ನಂಬಲದನು || ಪರಮ ಹಂಸಾರೂಢರಾಮನ | ಪರಮ ಪದವಿಯು ದೊರೆಯುವದು || ೩ ||

೩೨ ನೇ ಪದ.

[ ದಾಟಿ— ದುರಿತಸಂಸಾರವ ಎಂಬಂತೆ. ]

ಮೂರುಕರ್ಮಗಳ ಬಾಧೆಯಿಲ್ಲವು ಮನುಜ | ಪಾರಮಾರ್ಥವರಿದ ಪರಮಜ್ಞಾನಿಗೆ || ಪಲ್ಲ || ಅನಂತಕೋಟಿ ಜನ್ಮಗಳಿಗೆ ಮೂಲ| ವೆನಿಪ ಸಂಚಿತಕರ್ಮ ಜ್ಞಾನೋದಯವಾಗಲು || ಕನಸಿನಚಯದಂತೆ ಚನ್ನಾಗಿ ನಶಿಪುದು | ವಿನುತ ಶ್ರುತಿಯು ಜ್ಞಾನೇಶ ನಶ್ಯತೆನಲು || ೧ || ತನುವಿಡಿದು ತೋರ್ಪ ಕರ್ಮವದಾರಬ್ಧ ವೆನಿಪುದಿದು ಭುಂಜಿಸದೆ ತೀರದು || ಬಿನದಿ ಭುಂಜಿಸಿ ತೀರಿಸುವನು ಮಿಥುನದಂತೆ | ಚಿಹ್ನುಮಯ ಶ್ರುತಿಯು ನಾಭುಕ್ತಂಕ್ಷೀಯತೆನಲು || ೨ || ಜ್ಞಾನೋತ್ಪತ್ತಿಯಾದನಂತರೆಸಗಿದ | ಜ್ಞಾನಿಯ ಕರ್ಮವು ಆಗಾಮಿಯೆನಿಪುದು || ಧ್ಯಾನ ನಿಂದೆಯ ಮಾಡುವ ಮನುಜರಿಗೆ | ಮಾಣದೆ ಪುಣ್ಯಪಾಪವು ಪೋಗುವವು || ೩ || ಸತ್ಯಗತಿಯನರಹುತಿರುವ ಪರಮ | ಶ್ರುತ್ಯುಕ್ತಿಗಳು ಸುಹೃದಯವಾನ್ ಪುಣ್ಯ || ಕೃತ್ಯಾನ್ ದ್ವಿಷಂತಃ ಪಾಪಕೃತ್ಯಾನ್ ಗ್ರಹ್ಣಂ| ತೀ ತಿಯೆಂದು ಸಾರಿ ಕೂಗುತಿರಲಾಗಿ ||೪|| ಪರತತ್ವವಿದನಿಗೆ ಸರ್ವಕರ್ಮಾದಿಗಳ | ಎರಕವಿಲ್ಲೆಂದು ವರ ಶ್ರುತಿಯೇ ಕೂಗಲು || ಪರತತ್ವವಿದನಿಂತೀ ಸರ್ವಕರ್ಮವನೀಗಿ | ಗುರುರಾಮಾರೂಢರಾನಂದ ಪೊಂದುವನು || ೫ ||

೩೩ ನೇ ಪದ.

( ದಾಟಿ—ಕೇಳದಾಗಲಿ ಹೇಳಬಾರದು ಎಂಬಂತೆ. )

ಜಾತಿಜಾತಿಯೆಂದು ಬರಿದೆ | ಬೊಗಳುವದ್ಯಾಕೆ | ಜಾತಿಯೆಂಬುವ ಗುರ್ತು ಪೇಳಿರೊ || ಪಲ್ಲ || ಪೂತನಿರ್ಮಲಾತ್ಮನಮರೆದು | ಜಾತಿಜಾತಿಯೆನುತ ಘೋರ || ಪಾತಕದೊಳಗೆ ಮುಳುಗಿ ಪೋಗುವ | ಘಾತಕಮಾನವರೆ ನೀವು || ಅನುಪಲ್ಲ || ಐದು ಮಹಾಭೂತಗ

ಳಿಂದ | ಉದಿಸಿದ ತನುವಿಗೆ | ಮುದದಿ ವೀರಶೈವನೆನಲು | ಐದು ಮ ಹಾಭೂತಗಳಿಂದ | ಉದಿಸಿವೆಷ್ಟು ತನುಗಳವಕೆ || ಐದೆ ವೀರಶೈವನೆ ನಲು | ಇದಕೆ ಯಾವಪ್ರತಿಬಂಧವು || ೧ || ಇನ್ನು ಜೀವನಿಗೆ ವೀ ರಶೈ | ವ ಜಾತಿಯೆನಲು | ಎನಿತು ಜೀವರನಿತು ಆಹುದು || ತನು ಜೀವರೊಡಗೂಟಕೆನಲು | ಎನಿತು ತನುವು ಜೀವರೊಂದಿಹ | ರನಿತು ವೀರಶೈವಜಾತಿ | ಎನಲು ಅಸಂಭವವಲ್ಲವೆ || ೨ || ಪಾರಮಾರ್ಥವಿ ಚಾರ ಆಚಾರ | ಗಳನು ಪೊಂದಲು | ವೀರಶೈವನೆನಲು ಕೇಳಿಂ || ಭೂರಿ ನಿಖಿಳ ಜಾತಿಯವರು | ಪಾರಮಾರ್ಥವಿಚಾರ್ಯರವನು| ಶೇರಿ ಶಿ ಷ್ಟಾಚಾರರೆನಿಸಲು | ವೀರಶೈವರಲ್ಲವೆ ಅವರು || ೩ || ಪರತರ ಶ್ರುತಿ ಶಾಸ್ತ್ರಾದಿಗಳು | ಜಾತಿಗೋತ್ರವು | ಬರಿಯಭಾವದ ಬಳಕೆ ಆಹು ದೆಂದು || ಕರವನೆತ್ತುರೆ ಸಾರುತಿರಲು | ಜರಿದು ಅವುಗಳನ್ನೆಮ್ಮೊಳಿಂ ದ || ಪರಮಜಾತಿಯರೆನುತ ಘೋರ | ನರಕದೊಳಗೆ ಬೀಳ್ವನರರೆ || ೪ || ಜಾತಿಯೆಂಬುವ ಭ್ರಮೆಯುತ್ಯಜಿಸಿ | ಸ್ವಾತ್ಮಾನುಭವದೋ | ಳೋತು ಮುಳುಗಿದಾರೂಢರಾಮನ || ಪಾತಕ ಸೂತಕರಹಿತ | ಪಾ ದಕಂಜಕೆ ಮರೆಯಪೊಕ್ಕು || ಭ್ರಾಂತಿ ಸೂತಕರಹಿತರಾಗಿ | ಪೂತ ನಿರ್ಮಲ ಸುಖವ ಸವಿಯುದೆ || ೫ ||

## ೩೪ ನೇ ಪದ.

( ದಾಟಿ—ರಾಮಾರೂಢರ ನಾಮವ ಎಂಬಂತೆ. )

ದೇವನೆನಿಪನು ಪಾವನವೆನಿಪ ಜ್ಞಾನವ | ನೋವಿ ತಿಳಿಯಲೀ ನರನು || ಪಲ್ಲ || ಜೀವ ಶಿವನಿಂತೆಂಬ ಭೇದವನಳಿದು | ಜೀವ ಶಿವ ನ ರೂಪೊಂದಾಗಲು || ೧ || ಪಾದವಶ್ಯವ ತ್ಯಜಿಸಿ ಬೋಧಮಯಾ ತ್ಮನ | ಮೋದದಿ ಶೋಧಿಸಿ ಪೊಂದಲು || ೨ || ಕೋಹಂ ಭಾವನೆ ಯುರೆನಾಶವಾಗಿ ಪೋಗಿ | ಸೋಹಂ ಭಾವನೆಯುಳವಡಲು || ೩ || ಬಾಹ್ಯಂತರವೆನಿಪಾರುಸಮಾಧಿಯನು | ಮೋಹವನಳಿದು ಬೆರೆಯಲು || ೪ || ಪರಶಿವನೆನಿಪ ಶ್ರೀಮದ್ರಾಮಾರೂಢರ | ಪರತರಾನಂದವ ಸವಿಯಲು || ೫ ||

## ೩೫ ನೇ ಪದ.

( ಧಾಟಿ—ಮಾಡಲುಚಿತವೆ ಮನುಜ ಎಂಬಂತೆ. )

ಭೇದವಿಲ್ಲವು ಮನುಜ | ಭೇದವಿಲ್ಲವು || ನಾದಬಿಂದುಗಳಿಗತೀತ | ನಾದಾತ್ಮನರಿದ ಯೋಗಿಗೆ || ಪಲ್ಲ || ಘಟ ದೃಷ್ಟಾಪುರುಷನು | ಘಟವಲ್ಲವೆಂತಂತೆ || ಕುಟಿಲ ಪಂಚಕೋಶಗಳಿಗೆ | ದೃಷ್ಟಾ ನಾನೆಂದರಿತಯತಿಗೆ || ೧ || ಲೋಕದೊಳಗಿನೆಲ್ಲ ವಾದಿಗ| ಳ್ಯುಕ್ತಿಯಿಲ್ಲದೆ ವಾದಮಾಡಿ || ಅಕ್ರಿಯಾತ್ಮನರಿಯದೆ ಪೋದ್ರು| ಮ್ಯಕ್ ಜ್ಞಾನದಿಂದರಿತಗೆ || ೨ || ತ್ರಿತಿಯ ಗುಣದಿ ಬೆರೆದ ಜಗವು | ಅತಿ ಮಿಥ್ಯವೆಂದರಿದಗೆ | ಹಿತದಿ ಪರಿಪೂರ್ಣಾತ್ಮನೊಳು | ಮತಿಯನಿಲ್ಲಿಸಿದ ಯೋಗಿಗೆ || ೩ || ಸರ್ವಂ ಖಲ್ವಿದಂ ಬ್ರಹ್ಮ ವೇದು | ಸಾರಿ ಒರೆವ ಶ್ರುತಿಯನರಿದ || ತೋರ್ಪದೃಶ್ಯ ದ್ರುಕ್ಕುಗಳನು | ಜಾರಿ ಪೂರ್ಣನಾದ ಯಮಿಗೆ || ೪ || ವಿನುತ ಗುರು ರಾಮಾರೂಢರ | ಅನಘಾನಂದಸ್ವರೂಪವನು || ಬಿನದಿ ಸವಿವ ಪರಮಯತಿಗೆ | ತನುಮನಸಾದಿಗಳದೆಲ್ಲ || ೫ ||

## ೩೬ ನೇ ಪದ.

[ ದಾಟಿ—ಪ್ರಾಣಲಿಂಗವಿದನು ಗುರುವಿ ಎಂಬಂತೆ. ]

ಧನ್ಯನಾದೆ ನಾನು ಎನ್ನ | ಉನ್ನತ ಸುಖ ಸ್ವರೂಪವ || ಸನ್ನುತಗುರು ಮುಖದಿಂ ತಿಳಿದು | ಬನ್ನರೂಪವೆಲ್ಲ ಪೋಗಿ || ಪಲ್ಲ || ಮೂರುದೇಹ ಮೂರುಗುಣಕೆ | ಮೂರವಸ್ಥೆ ಮೂರು ಜೀವಕೆ | ಬೇರೆಯಾದ ಸಾರತರ ಪರಮವಸ್ತು ನೀನೆಂಬ|| ಶೂರವಾದನು ಭವವಧೀರ ಗುರುವಿನಿಂದ ಕೇಳಿ | ಮೂರುತಾಪಾರೂಮ್ಮಿಗಳು ಮೂರುವಾಸನೆಗಳ್ಪೋಗಿ || ೧ || ಅರಿವು ಮರವು ರಹಿತವಾದ ಪರಮವೆನಿಪ ತೊಮ್ಮವಸ್ತು । ಪರಿಪರಿಯಿಂ ತೋರ್ಪನಾಮರೂಪಗಳಿಗೆ ಪೆರತೆಂಬ || ಪರಮ ಬೋಧವನ್ನು ಕೇಳಿ ತ್ವರದಿ ಸತ್ಯಾಸತ್ಯ ವಸ್ತುವ| ನರಿದು ಸರ್ವ ತೋರ್ಕೆಗೆ ನಾನಿರುತ ಸಾಕ್ಷಿಯೆಂದರಿದು || ೨ || ನಿರುಪಮ ಆನಂದರೂಪ| ಸ್ವಗತಾದಿ ಭೇದರಹಿತ| ಪರಿಪೂರ್ಣ ಬ್ರಹ್ಮವು

ನೀನೆಂಬ ಪದಗಳ ಜ್ಞಾನವ || ಪರಮಾರೂಢ ರಾಮನ ಕರುಣ ಕಟಾಕ್ಷದಿಂದಲೀದು | ನಿರುತ ಸ್ವಾನುಭವದೋಳ್ಮುಳುಗಿ ನಿಜಸುಖಮಯವಾಗಿ || ೩ ||

### ೩೭ ನೇ ಪದ.

[ ದಾಟಿ— ನಂಬುನಂಬಲಿಲೊ ಮನುಜ ಎಂಬಂತೆ. ]

ಆನಂದಮಯ ಮಾಡಿದಾ | ಶ್ರೀಗುರುನಾಥಾ | ಆನಂದಮಯ ಮಾಡಿದಾ || ಜ್ಞಾನಹೀನನಿರಲು ಜ್ಞಾನವ ಪಾಲಿ!
ವವನೀಸಿ ಸದ್ಭಾವವನು ಪಿಡಿಸಿ || ಪಲ್ಲ || ಪಂಚಭೂತಾತ್ಮಕವಾದ ತನುವಿಗೆ | ವಂಚನೆ ಮಾಡುತಿರಲು || ಹಂಚಿಕೆಯಿಂದಲಿ ನೀನದಕೆ ಸಾಕ್ಷಿಯೆಂದು | ಮಿಂಚು ಗುರುಳೆಯ ತೆರದಿ ತನುವೆಂದು ಬೋಧಿಸಿ || ೧ || ನಾಮ ರೂಪವನು ಮೆಚ್ಚಿ | ಮತ್ತದರೊಳು | ಪ್ರೇಮಾದಿ ಮರೆತಿರಲೂ | ನಾಮ ರೂಪವು ಮಿಥ್ಯ ನೀನದರೊಳು ವಿಭು | ಪ್ರೇಮಭಾತಿ ಅಸ್ತಿರೂಪೆಂದು ಬೋಧಿಸಿ || ೨ || ಜಗದ ರಂಜನೆಗೆ ಮೆಚ್ಚಿ | ಅದಕೆ ಸತ್ಯ ಬಗೆಯ ಕಲ್ಪಿಸಿ ಕೊಂಡಿರಲು || ಜಗವು ರಜ್ಜು ಕಾಕೋದರ ನ್ಯಾಯವೆಂದು ಹೇಳಿ | ನಿಗಮಗೋಚರ ಬ್ರಹ್ಮ ನೀನೆಂದು ಬೋಧಿಸಿ || ೩ || ಪಂಚಭ್ರಮೆಯನಳಿಸಿ | ಕೋಣೆನಗೆ | ಪಂಚಲಕ್ಷಣವ ತಿಳಿಸಿ || ಪಂಚವಿಂಶತಿ ಸೂಕ್ಷ್ಮ ತತ್ವಗಳ ಭೇದಿಸಿ | ಪಂಚಕೋಶಾತೀತ ನೀನೆಂದು ಬೋಧಿಸಿ || ೪ || ಐದು ಭೇದವ ಜರಿಸಿ | ಧೃಡವಾಗಿ | ಸದಮಳ ಭಾವ ಪಿಡಿಸಿ || ಸದ ಸತ್ಯವಲ್ಲದ ಬಂಧಾದಿವುಸಿಯೆಂದು | ಹೃದಯಸಂಶಯಕಳೆದು ಶ್ರೀರಾಮಾರೂಢನು || ೫ ||

### ೩೮ ನೇ ಪದ.

( ದಾಟಿ—ಇನ್ನಾದರೀಭವಕೆ ಹೇಸಬಾರದೆ ಮನುಜ ಎಂಬಂತೆ )

ಪರಮಜ್ಞಾನಿಯು ಮುಕ್ತ ಸ್ವರೂಪನು | ನಿರುತ ವಿಷಯಗಳಲಿ ತೊಡಗಿದ್ದರೂ || ಪಲ್ಲ || ಯಾವಯಾವ ವಿಷಯವನು ಭೋಗಿಸಿದರೂ | ಯಾವದು ಭೋಗಿಸದಂತಿರುವನವನು || ಪಾವನ ಶ್ರ

ತಿನ್ನೈವ ಕಿಂಚಿತ್ಕರೋಮಿತಿಂ|ದೋವಿ ಪೇಳಲು ಮರಳಿನ್ನೇನು ಪೇಳು ವದು || ೧ || ಮರದೊಳಿಹುದಗ್ನಿ ಅಗ್ನಿಯೊಳ್ಮರವಿಲ್ಲ|ದಿರುವಂತೆ ಜ್ಞಾನಿಯು ಸಂಸಾರ ದೋಳಿಹನು || ದುರಿತ ಸಂಸಾರವು ಅವನೊಳಿಲ್ಲವೆಂದು | ಒರೆಯುತಿರಲು ವರಶಾಸ್ತ್ರಗಳು ಕೂಗಿ || ೨ || ಪರಿಭವಕೆ ಬೀಜವಾದ ಜ್ಞಾನ ಖಂಡಿಸಿದ | ಪರಮ ಜ್ಞಾನಿಯು ವೃಕ್ಷದಿಂ ಬಿಡಲ್ಪಟ್ಟ || ಕರವುಳ್ಳ ನರನಂತೆ ಶ್ರೀರಾಮಾರೂಢನ | ಹರುಷ ಪಡೆಯುವನೆಂತಿರ್ದರವನು || ೩ ||

೩೯ ನೇ ಪದ.

[ ದಾಟ—ಬೋಧಿಸಬಾರದು ಎಂಬಂತೆ. ]

ವರಜ್ಞಾನಿಗಳಾರಬ್ಧ ಕರ್ಮವೆ ನಾಲ್ಕು | ತೆರನಾಗಿಹುದದರಂದವನು ಪೇಳ್ವೆ || ಪಲ್ಲ || ಭೋಗದಲ್ಲಿಯೇ ಪಶುವಿನಂತೆ ತತ್ಪರ|ನಾಗಿ ಆತ್ಮ ಪ್ರೇಮನಹುದೆ ತೀವ್ರವು || ಭೋಗದೊಳಗಿದ್ದಾಗ್ಯೂ ಪರಬ್ರಹ್ಮದ ವಶ|ನಾಗಿ ತರುಳನಂತೆ ವಿನೋದಿಪುದೆ ಮಧ್ಯ || ೧ || ಜರಿದು ಭೋಗವನು ಆತ್ಮನಲ್ಲಿಯೆ ತ|ತ್ಪರನಾಗಿ ನಿಜಾನಂದದಿಂದಿರ್ಪುದೆ ಮಂದ॥ ನಿರವಧಿ ಆತ್ಮನಲ್ಲಿಯೆ ನಿಂದನುಗೆಡದೆ | ಪರಮುಕ್ತನಂತೆ ತೋರ್ಪುದೆ ಸುಪ್ತವು || ೨ || ಒಂದೊಂದರೊಳು ಸ್ವೇಚ್ಛಾ ಪರೇಚ್ಛಾ ಅನಿಚ್ಛಾ | ಎಂದೆನಿಸುವ ತ್ರಿತಯ ಕರ್ಮಗಳು || ಪೊಂದಿ ಎಣಿಕೆಗೆ ಪನ್ನೆರಡು ವಿಧವಾಗಿ | ಕುಂದದೆ ತೋರ್ಪವು ಪೂರ್ವಸಂಸ್ಕಾರದಿಂ || ೩ || ಆತ್ಮರತಿರಾತ್ಮ ಕ್ರೀಡ ಆತ್ಮ ಮಿಥುನ | ಆತ್ಮಾನಂದವೆಂದು ಶ್ರುತಿಯು ಒರೆಯಲು || ಸ್ವಾತ್ಮಾನುಭವಿಗಳೊಂದೆ ಬಗೆಯಾಗಿಹದೆ | ಸ್ವಾತ್ಮಸಂಸ್ಕಾರದಿಂದನಂತ ಬಗೆಯಿಹರು || ೪ || ಹಲವು ತರದಿಂದ ತೋರ್ಪ ಕರ್ಮದಿಂ | ಹಲವುತರವಾಗಿ ಜ್ಞಾನಿಗಳಿರಲು || ಕಲುಷರಹಿತ ಶ್ರೀರಾಮಾರೂಢನ | ಲಲಿತ ಸುಖವೆಲ್ಲರಿಗೊಂದೆ ಸರಿಯು || ೫ ||

### ೪೦ ನೇ ಪದ.

[ ದಾಟಿ—ಸಹಜಬೋಧೆಯು ಸಮನಿಪುದೆ ಎಂಬಂತೆ. ]

ತೀವ್ರದೊಳಗಿನ ಆರಬ್ಧಕರ್ಮದ| ಭಾವವೆಂತೆನಲರಿ ಸ್ವೇಚ್ಛಾ ಪರೇಚ್ಛಾದಿ || ಪಲ್ಲ|| ಮುನಿ ಪತಿ ಯಾಜ್ಞವಲ್ಕ್ಯ ಮಹಾಋಷಿಯು | ವಿನುತ ಜೀವನ್ಮುಕ್ತಿವುಳ್ಳವನಿದ್ದರೂ || ಜನಕನ ಸಭೆಯಲಿ ಉನ್ನತ ಗೋವ್ರಗಳಂ| ವಿನದಿ ಒಯ್ಯಸಿದ್ದೆ ಸ್ವೇಚ್ಛಾ ತೀವ್ರವು || ೧ || ಶರಧಿಯೊಳ್ಮೀನುಗಳ ಕ್ರೀಡೆಯಂ ಕಂಡು ಸೌ| ಭರಿ ಮುನಿಯು ಕಾಮಚಿತ್ತನಾಗಿ ಮಾಂಧಾ || ತೃರಾಜನೈವತ್ತು ಕನ್ನಿಕೆಯರ ಕೂಡಿ | ಹರುಷವ ಪೊಂದಿದ್ದೆ ಸ್ವೇಚ್ಛಾ ತೀವ್ರವು || ೨ || ಸತಿಯಾದ ದಿತಿಯು ಪ್ರದೋಷ ಕಾಲದಲಿ | ರತಿಸುಖವನ್ನು ಬಯಸುತಿರಲಾಗಿ || ಮತಿವಂತ ಕಶ್ಯಪನಾಕೆ ಇಚ್ಛೆಯಂತೆ | ರತಿಸುಖವ ಪೊಂದಿದ್ದೆ ಪರೇಚ್ಛಾ ತೀವ್ರವು || ೩ || ವಿದ್ಯಕೆಭಾಸ್ಕರ ಚಂದ್ರನು ಬ್ರಹಸ್ಪತಿಯ | ಸದನದಲಿರಲು ಈತನ ಪತ್ನಿಯು || ಮುದದಿಂದಾತನನು ಇಚ್ಛೈಸಲಾತನು ಅದರಂತೆ ವರ್ತಿಸಿದ್ದೆ ಪರೇಚ್ಛಾ ತೀವ್ರವು || ೪ || ವರಸ್ಥಾನದಲ್ಲಿದ್ದ ಮಾಂಡವ್ಯಋಷಿಗೆ | ಬರಿದೆ ಕಳವಿನ ಆರೋಪವು ಬಂದು || ತ್ವರದಿ ಶೂಲಾರೋಹಣ ಮಾಡಿದ್ದವಗೆ | ವರಜ್ಞಾನಿಗಳನಿಚ್ಛಾ ತೀವ್ರವೆಂಬುವರು || ೫ | ಸನಕಾದಿಗಳು ಪರಮಾತ್ಮನ ಸಭೆಯಲಿ | ಬಿನದಿ ಪೋಗುವಾಗ್ಗೆ ಜಯವಿಜಯರಿವ || ರನು ತಡೆಯಲಿವರು ಸತ್ವಗುಣಶೀಲ | ರೆನಿಸಿ ಶಾಪವಿತ್ತದ್ದನಿಚ್ಛಾ ತೀವ್ರವು || ೬ || ಇವರಿತಿಹಾಸವನರಿದು ನೋಡಲು| ತವಿಸದು ಪ್ರಾರಬ್ಧ ಕರ್ಮ ಆಧುನಿಕ || ಪವಿತ್ರ ಜ್ಞಾನಿಗೆ ವಿಕ್ಷಿಪ್ತ ವೃತ್ತಿಯುಳ್ಳ | ಶಿವರಾಮಾರೂಢರ ಸುಖವು ಬಿಡದು || ೭ ||

### ೪೧ ನೇ ಪದ.

( ದಾಟಿ—ಮರೆಯದಿರು ಮರೆಯದಿರು ಎಂಬಂತೆ )

ಸಾರಿ ಪೇಳುವೆನಿಲ್ಲಿ ಮಧ್ಯಸ್ಥ ಸ್ವೇಚ್ಛಾದಿ | ಆರಬ್ಧ ಕರ್ಮದ ಲಕ್ಷಣವ ಮನುಜ || ಪಲ್ಲ || ಭೋಗಕ್ಕೆ ಮುಖ್ಯತೆದೋರಿದತ್ಪಾತ್ರೇ

ಯೆನು | ಭೋಗಾಭಾವದೋಳ್ಕಾರ್ತಿವೀರ್ಯಾದಿಕರ || ಬೇಗದಿಂ ಕುಂತು ನಿಜಬೋಧ ಮಾಡುತ ಕಾಲ | ನಾಗಿವಿನೋದಿಸಿದ್ದಸ್ವೇಚ್ಛಾ ಮಧ್ಯವು ||೧|| ಕಾಶೀರಾಜನಾದ ಜಾತಶತ್ರುವು ತನ್ನ | ವಾಸಕ ಳದಲಿ ವಿಷಯ ಭೋಗಿಸುತ ಅವ || ಕಾಶದಲಿ ಸ್ವಸ್ವರೂಪವನು ಚಿಂತಿಸುತ್ತ | ಕೂಸಿನಂತಿರ್ದುದೆ ಸ್ವೇಚ್ಛಾ ಮಧ್ಯವು ||೨|| ಜಡಭರ ತನು ಶಿಕಿಗಣರಾಜನಿಚ್ಛೆಯಿಂ | ನಡೆಯುವಾಗ್ಗೆ ಪಲ್ಲಕಿಯಂ ಪೊತ್ತು ರಾಜನು || ನುಡಿಯಲು ಗಡನೆ ನಡೆಯುವದಿಲ್ಲೇಕೆಂದು | ಕ ಹುತ್ತೇಚ್ಛ ಜ್ಞಾನರುಹಿದ್ದು ಪರೇಚ್ಛಾಮಧ್ಯ || ೩ || ವಿರತಿಯಿಂ ಶಿಖಿ ಧ್ವಜನರಣ್ಯವಂ ಕೇರಿರಲು | ವರಸತಿಯಾದ ಚೂಡಾಲಿಯು ರೂ ಪಾಂತರ || ಧರಿಸಿ ಸುಜ್ಞಾನವನರುಪಿ ಸ್ವಸ್ಥಾನಕೆ | ಕರೆಯಲಾತ ಬಂ ದುದೆ ಪರೇಚ್ಛಾ ಮಧ್ಯ || ೪ || ದಿನಕರನು ನಿಶ್ರೇಯಸಾನಂದದೋ ಳ್ಮುಳುಗಿ | ವಿನುತ ಜೀವನ್ಮುಕ್ತ ಸ್ವರೂಪನಾದರೂ || ಅನಘ ಈಶ್ವ ರನಪ್ರೇರಣೆಯಿಂದಲಿ ಜಗ | ವನು ಪ್ರಕಾಶಿಸುವದನಿಚ್ಛಾ ಮಧ್ಯವು || ೫ || ವರ ಭಗೀರಥನು ಪ್ರಪಂಚವ ಸಾರವೆಂ | ದರಿತು ತ್ರಿಶುಲ ಗುರುಗಳನು ಕುರಿತು || ವರಜ್ಞಾನಪಡಕೊಂಡು ಚರಿಸುತಿರಲವಗೆ | ಧೊರೆತನವು ಬಂದದ್ದನಿಚ್ಛಾ ಮಧ್ಯವು || ೬ || ಅರುಹಿ ದಿಲ್ಲಿಯುಮಧ್ಯ ಪ್ರಾರಬ್ಧದಿಂದಲಿ | ಪರತತ್ವವಿದನಿಗೆ ಗತಾಗತ ವೃತ್ತಿಯು || ಇರಲು ಶ್ರೀಮತ್ಸದ್ಗುರು ರಾಮಾರೂಢರ | ಪರಿಪೂರ್ಣ ಸುಖವು ದೊರೆಯು ವದು ಸತ್ಯ || ೭ ||

ಳ೨ ನೇ ಪದ.

( ದಾಟಿ— ಪಡೆವೆ ನೀನೆಂದಿಗೆ ಎಂಬಂತೆ )

ಅರಪುವೆ ಸ್ವೇಚ್ಛಾದಿ ಮಂದದೊಳಗಿವ ಕರ್ಮ | ದಿರವನು ಹರುಷದಿಂ ತಿಳಿಯೊ ನೀ ಮನುಜ || ಪಲ್ಲ || ಬಲಿಚಕ್ರವರ್ತಿಯು ಬಹುಕಾಲ ಭೋಗವ | ನಲಿದು ಭೋಗಿಸಿ ಏಕಾಏಕಿ ವಿರತಿಯಿಂ|| ತಿಳಿದು ಜ್ಞಾನವ ಸಂಪ್ರಜ್ಞಾತ ಸಮಾಹಿತೆ | ಯಲಿ ಸುಖದಿಂದಿರ್ದ

ಡೆ ಸ್ವೇಚ್ಛಾ ಮಂದವು || ೧ || ಕವಿ ಹರಿ ಪ್ರಭೃತಿಗಳಾದೊಂಭತ್ತು ಮಂದಿ | ಶಿವಯೋಗೀಶ್ವರರು ತಮ್ಮಿಚ್ಛೆಯಿಂದಲೆ || ತವಿಸಿ ಭೋಗಾದಿಗಳಾತ್ಮಾನು ಸಂಧಾನದ | ಸವಿಸುಖದೊಳಿರ್ದುದೆ ಸ್ವೇಚ್ಛಾಮಂದವು || ೨ || ವರಸಾಧನಯುಕ್ತ ಪ್ರಲ್ಹಾದನು ವಿಷ್ಣು | ಪರಮಾತ್ಮ ನಿಷ್ಠೆಯಿಂದಲಿ ಆತ್ಮಾನಾತ್ಮ || ವರವಿವೇಕ ಹೊಂದಿ ಸವಿಕಲ್ಪಸಮಾಧಿಯೋ | ಳ್ನಿರುತ ಸುಖದಿಂದಿರ್ದುದೆ ಪರೇಚ್ಛಾಮಂದ || ೩ || ಸುರುಚಿಯು ಮಾಡಿದವಮಾನದಿಂದಲಿ ಧೃವ | ನರಣ್ಯಕ್ಕೆಪೋಗಲು ಅಕಸ್ಮಾತ್ ನಾರ || ದರದರ್ಶನವಾಗಿ ಜ್ಞಾನವುಂಟಾಗವನು | ಹರುಷಿತನಾದುದೆ ಪರೇಚ್ಛಾಮಂದವು || ೪ || ಜನಕರಾಜನು ಗಗನಗಾಮಿಗಳಾದ | ವಿನುತ ಸಿದ್ಧರ ಚರ್ಚೆಯನು ಶ್ರವಣಮಾಡಿ || ಬಿನದಿ ವಿವರಿಸುತ ಸಂಪ್ರಜ್ಞಾತ ಸಮಾ | ಧಿನಿಷ್ಠನಾದುದೆ ಅನಿಚ್ಛಾಮಂದವು || ೫ || ವಾಮದೇವ ಋಷಿಗೆ ಮಾತೆಯು ಗರ್ಭದಲಿ | ವ್ಯೋಮಾತೀತಾತ್ಮ ಜ್ಞಾನೋದಯವಾಗಿ || ನೇಮದಿ ಸ್ವಾನುಭವದಲ್ಲಿ ಮಿಥುನದಂತೆ | ಪ್ರೇಮದಿಂದಿರ್ದುದೆ ಅನಿಚ್ಛಾ ಮಂದವು || ೬ || ಮಂದಪ್ರಾರಬ್ಧದಿಂದಲಿ ವರಜ್ಞಾನಿಗೆ | ಅಂದವಾದ ಸಂಶ್ಲಿಷ್ಟ ವೃತ್ತಿಯು ಇರಲು || ಸಂದೇಹವಿಲ್ಲದೆ ಸ್ವಾನುಭವದೊಳ್ಮುಳುಗಿ | ನಂದದೊಳ್ಮೆರೆಯುವ ಶ್ರೀರಾಮಾರೂಢರ || ೭ ||

## ೪೩ನೇ ಪದ.

( ದಾಟಿ — ಭವಮಾಲೆಗೊಳಗೊಳಗಾದೆ ಎಂಬಂತೆ )

ಸುಪ್ತ ಪ್ರಾರಬ್ಧದೊಳಗಿನ ಕರ್ಮದಿರವ | ನೊಪ್ಪಿಗೆಯಿಂದಲಿ ಪೇಳುವೆ ಸ್ವೇಚ್ಛಾದಿ || ಪಲ್ಲ || ಶುಕನು ಜನಕನ ಸುಬೋಧ್ಯವಾದರೂ | ಅಕಲಂಕ ಜ್ಞಾನವಾಗದೆ ರಾಜನಾದ ಜ || ನಕನ ಬಳಿಗೆ ಪೋಗಿ ಸಂಶಯ ನಾಶಾಗಿನಿ | ರ್ವಿಕಲ್ಪ ಸಮಾಧಿಯಿಂ ಪೊಂದಿದ್ದೆ ಸ್ವೇಚ್ಛಾಸುಪ್ತ ||೧|| ತನ್ನಿಷ್ಠೆಯಿಂದಲೆ ಪ್ರತಿಬಂಧವಿಲ್ಲದೆ | ಉನ್ನತ ಸಮಾಧಿಸ್ಥನಾಗಿ ವೃಷಭದೇವ || ಚನ್ನಾಗಿ ಪರಮುಕ್ತನಂತೆ

ಕಾಣಿಸಿದ್ದೆ | ನನ್ನಿಯಿಂದಲಿ ಸ್ವೇಚ್ಛಾ ಸುಪ್ತವೆನಿಪುದು ||೨|| ಶ್ರೀರಾಮಚಂದ್ರನು ವಸಿಷ್ಠ ಮುನಿಗಳಿ | ಚ್ಛಾರೂಪ ಪ್ರಯತ್ನದಿಂ ಪರಮವೆನಿಸಿದ || ಸಾರಭರಿತ ನಿರ್ವಿಕಲ್ಪ ಸಮಾಧಿಯೋ | ಳೋರಂತೆ ಮುಳುಗಿದ್ದೆ ಪರೇಚ್ಛಾ ಸುಪ್ತವು || ೩ || ಭರದಿ ವಿಂಧ್ಯಾದ್ರಿಯು ಗುರುಗಳ ಚರಣಕೆ | ಎರಗಲು ಗುರುಗಳ ವಿಜ್ಞಾಪನೆಯಂತೆ || ಪರತರ ನಿರ್ವಿಕಲ್ಪ ಸಮಾಹಿತೆಯೊಳಗೆ | ನಿರುತರ ಬೆರೆದುದೆ ಪರೇಚ್ಛಾ ಸುಪ್ತವು || ೪ || ಸತಿಯಾದ ದೇವಹೂತಿಗೆ ಕರ್ದಮ ಮುನಿಯ | ನುತಿಪ ಸರ್ವರಿಂದೀಶನ ಪ್ರೇರಣೆಯಿಂ || ಸತತ ನಿರ್ವಿಕಲ್ಪ ಸಮಾಧಿಯೊಳು ನ್ಯೈ ಮ | ರೆತು ಸ್ಥಿತಳಾಗಿರ್ದುದನಿಚ್ಛಾ ಸುಪ್ತವು || ೫ || ಈ ಧರೆಯು ಜನ್ಮದಿಂದೇವತ್ವದಿಂದ ಶ್ರು | ತ್ಯಾದಿಗಳಿಂದಲಿ ಪ್ರಸಿದ್ಧವಾದಂಥ || ಬೋಧಮಯ ಪರಸುಜ್ಞಾನವುಳ್ಳವ | ಳಾದ್ದರಿಂದಿವಳದನಿಚ್ಛಾ ಸುಪ್ತವು || ೬ || ಇಂತು ತೋರುವ ಸುಪ್ತ ಪ್ರಾರಬ್ಧದಿಂದಲಿ | ಚಿಂತೆವಡೆಯದ ಸ್ವಲೀನವೃತ್ತಿಯಿರಲು || ಕಂತುಹರಜ್ಞಾನಿಗೆ ಶ್ರೀರಾಮಾರೂಢರ | ಸಂತಸದೋಳೈಕ್ಯನೆನಿಸುವ ಸಹಜ || ೭ ||

## ೪೪ ನೇ ಪದ.

( ದಾಟಿ—ಪುರಹರ ನಿನಗಿನ್ನು ದಯಬಾರದೆ ಎಂಬಂತೆ )

ಜೀವಭಾವನೆ ಜರದು ಪರಬ್ರಹ್ಮವಾನೆಂಬ | ಭಾವನೆಯೊವ್ಮೆ ಜನಿಸಲು ಮಗುಳೆ || ಪಲ್ಲ || ಹಾಲುವಿಕಾರವಾಗಿ ಘೃತವೆನಿಸಿ ಮಗುಳೆ | ಹಾಲು ಆಗದಂತೆ ಪಂಚಕೋಶಗಳನು || ಲೀಲೆಯಿಂದಲಿ ಮಥಿಸಿ ಅದರೊಳು ಪುಟ್ಟಿದ | ಫಾಲನೇತ್ರನಾನೆಂಬ ಜ್ಞಾನಾದಮೇಲೆ ||೧|| ಮುತ್ತು ನೀರಲಿ ಪುಟ್ಟಿ ಬಳಿಕ ನೀರಾಗದಂತೆ | ಸತ್ಯಸ್ವರೂಪನಾದ ತನ್ನಲ್ಲಿ ಅನಾದಿಯಿಂ || ಸತ್ಯವೆನಿಸಿ ತೋರ್ಪಾ ಜ್ಞಾನವು ಲಯವಾಗಿ | ನಿತ್ಯಾತ್ಮನಾನೆಂಬ ಜ್ಞಾನವಾದಮೇಲೆ ||೨|| ವರಶ್ರುತಿ ಬ್ರಹ್ಮವಿದ್ಬ್ರಹ್ಮೈವಭವತೀಂದು | ಒರೆಯುತಿರಲು ಭರದಿಂದಾತ್ಮಾನಾತ್ಮ|| ಪರಮಾನುಭವವನು ತಿಳಿದು ನಿರುಪಮ | ಪರಿಪೂರ್ಣವಸ್ತು

ತಾನೆಂಬ ಜ್ಞಾನಾದಮೇಲೆ || ೩ || ವರಜ್ಞಾನಿಯು ಪ್ರಾಣಶರೀರವ ನು ಬಿಟ್ಟು | ಹೊರಗೆ ಹೋಗದೆ ಅಲ್ಲಿಲಯಿಸುವದು || ಪರಮಶ್ರುತಿ ಯುಕ್ತ ಸಮವಲೀಯತೆಂದು | ಕರವೆತ್ತಿ ಸಾರಲು ಜ್ಞಾನವಾದಮೇಲೆ || ೪ || ಮೃತ್ತಿಕೆಯೊಳುದಿಸಿದ ಘಟವು ಮಗುಳೆ | ಮೃತ್ತಿಕೆಯಾಗ ದಂತೆ ಜ್ಞಾನಿಯು ಸಕಲ || ತತ್ವಗಳನ್ನೆಲ್ಲ ಶೋಧಿಸಿ ರಾಮಾರೂಢ | ಸತ್ಯಸುಖವನ್ನು ಹೊಂದಿದಮೇಲೆ || ೫ ||

## ೪೫ ನೇ ಪದ.

( ದಾಟಿ—ಪತಿವ್ರತೆಯಾಗಿರಮ್ಮಾ ಎಂಬಂತೆ )

ಎಷ್ಟುಭ್ರಷ್ಟರು ದುಷ್ಟಮೂರ್ಖರು | ನಿಷ್ಠೆಯನಿಡರು ||ಪಲ್ಲ|| ನಿಷ್ಠುರದಿಮಿಷ್ಟಿಲ್ಲಗುಣವು||ನಷ್ಟಾಗಿಸೃಷ್ಟಿಯೊಳು ಕೆಟ್ಟರು|| ಅಷ್ಟಮದ ದಿಂ ಪ್ರತಿಷ್ಠೆಬೆಳಸಿ | ಶಿಷ್ಟಜ್ಞಾನಿಗಳರಿಯದಿಪ್ಪರು || ಅನುಪಲ್ಲ || ಜ್ಞಾನಿಗಳು ಸರ್ವರಲಿ ಸಮದೃಷ್ಟಿ | ಘನಪಾಪವನ | ಷ್ಟಾನುಮಾನಿ ಸಿದ ವರಗದು ಕಷ್ಟ || ಏನು ಹೇಳಲಿ ಹೀನದೃಷ್ಟ | ಮಾನಸರಾಜ ನೊಳಗೆ ಇಷ್ಟ || ಜ್ಞಾನವರಿಯದೆ ಹ್ಯಾಗೆ ಪರಿಷ್ಟ | ತಾನೆಂಬುವದ ಧ್ಯಾಸವೆಷ್ಟ || ೧ || ಎದುರಿನಲಿ ಸ್ತುತಿಸುವರು ಶ್ರೇಷ್ಠರೆ ತ | ಬೋಧಿಲ್ಲದೀತು | ಹದರದಲೆ ಹಿಂದೆ ನಿಂದಿಪರು ಸ್ವರತ || ಮದಮತ್ಸರ ಹೆಚ್ಚಿಸುತಲಿತು | ಪದವಿ ಕಳಕೊಂಡರಿಲ್ಲೆ ಕುಂತು || ಕುದಿದು ವಿಷ ಯಭಿಮಾನ ಚಿಂತ್ಯೋ | ಸದಮಳಾತ್ಮರಾಗುವದೆಂತೊ || ೨ || ದುರಿ ತ ವಿಚಾರಿಗಳು ಕಪಟರು | ಪರಪೀಡಕರು | ಗುರುದೂಷಕ ಪ್ರತಿ ಕೂಲಕರು || ಪರಮ ಪುರುಷಾರ್ಥವಿಲ್ಲದವರು | ದುರುಳರು ಭಕ್ತಿರ ಹಿತರೆನಿಪರು || ನಿರಸರಿಗೆ ಗತಿಯೆಂಬುದಸ್ಥಿರ | ತರಳತಪ್ಪದುರುತರ ಘೋರ || ೩ || ದೇವರಾರೂಢನೆಂಬುದು ಮರೆತು | ಜೀವಶ್ರುತಿ ರೆಂತು | ಭಾವಿಸದೆ ಕುತರ್ಕ ಬೆಳಸುತ || ಪಾಪಸಲ್ಲದ ಸಿದ್ಧಿಬಯಸುತ | ಯಾವ ಮಹಿಮೆಯು ನಿಮ್ಮದೆನುತ || ದೇಹಲೋಕಾಂತರ ಪಾಪ ಪತಿತ | ದೇವಬ್ರಹ್ಮೈಕ್ಯರಿಯದೆ ಗುರುತ || ೪ || ನೀರಿನೊಳು

ತೊಸಳೆಯ ಭಯಕಾಟ | ತೀರಂತು ದಾಟಿ | ಬೇರಿ ಅಂಬಿಗನಿಂದ ಲಭ್ಯಾಟ || ಕಾರಣ ಭವಸಿಂಧು ಪ್ರಕಟ | ಅರಿತು ಅಜ್ಞಾನ ನಾಶ ವೃಲಟ || ಆರೂಢರಾವು ಬ್ರಹ್ಮನಿಷ್ಠ | ಗುರುವಿನಾನಂದ ಶ್ರೇಷ್ಠ ವಾಟ || ೫ ||

೪೬ ನೇ ಪದ.

( ದಾಟಿ— ಆರೇನು ಮಾಡುವರು ಆರಿಂದಲೇನಹುದು ಎಂಬಂತೆ )

ಅರೆ ಮರುಳರಲ್ಲವೆ ಬರಿದೆ ಬೊಗುಳುವೀ | ನರರು ಹರಿಶ್ರೇಷ್ಠ ಹರಶ್ರೇಷ್ಠನೆಂದು || ಪಲ್ಲ || ಹರಿಯು ಶ್ರೇಷ್ಠನೆಂದು ತಿಳಿಯಲು ಸ್ಕಂಧ | ಪುರಾಣದಲಿ ಹರಿಯು ಶೇವಕನೆಂತಲಾ || ಹರನು ಶೇವ್ಯನೆಂತಲರುಹಿಲ್ಲವೇ ಕೂಗಿ | ಪರಬ್ರಹ್ಮವಿದನಾದ ವ್ಯಾಸಮಹರ್ಷಿಯು || ೧ || ಹರನು ಶ್ರೇಷ್ಠ ರೂಪನೆಂದು ತಿಳಿಯಲು | ವರಮುನಿಗಳಿಂದ ವಂದಿತ ವ್ಯಾಸನು || ಅರುಹಿಲ್ಲವೆ ಪದ್ಮಪುರಾಣದಲಿ ಸಾರಿ | ಹರಿಯೇ ಸರ್ವೋತ್ತುಮನೆಂದು ಆತನು || ೨ || ಹರಿಹರರು ಅಲ್ಲದೆ ಆದಿಶಕ್ತಿ ಆಹ | ರ್ಕರ ಗಣಪತಿ ಪರಮ ಸ್ವರೂಪರೆಂ || ದರಿದು ನೋಡಲಿವರಾದರೂ ಸಹ ಹರಿ | ಹರಾದಿಗಳಾಜ್ಞಾಂಕಿತರಾಗಿಲ್ಲವೆ ||೩|| ಒಂದೊಂದು ಮೂರ್ತಿಯನು ಒಂದೊಂದು ಸ್ಥಾನದಲಿ | ಚಂದದಿ ಶ್ರೇಷ್ಠವೆಂದ್ವರ್ಣಿಸಿದ ವ್ಯಾಸನ || ಅಂದವಾದಿಂಗಿತವ ನರಿಯದೆ ಹರಿಹರಾದಿಗಳ | ಕುಂದು ಹೆಚ್ಚುಮಾಡಿ ಅರುಪುವೀ ನರರು || ೪ || ಕಾರ್ಯಕಾರಣ ಭಾವವರಿಯದೆ ಬರಿದೆ | ಸಾರಿ ವಾದಮಾಡಿ ಶ್ರೀರಾಮಾರೂಢರ || ಸಾರತರ ಸುಖಕೆ ದೂರಾಗುವರು ಶ್ಯಾಲಕ | ಸಾರಮೇಯ ನ್ಯಾಯದಂತೆ ಈ ನರರು || ೫ ||

೪೭ ನೇ ಪದ.

( ದಾಟಿ— ಕೇಳಿದಾಗಲೆ ಹೇಳಬಾರದು ಎಂಬಂತೆ )

ಎಷ್ಟು ವರ್ಣನೆಯನ್ನು ಮಾಡಲಿ | ವೈಧಿಕರನಿಲ್ಲಿ | ದೃಷ್ಟಿಯಿಂದಲಿ ನೋಡಿ ನಾನೀಗ || ಪಲ್ಲ || ಶಿಷ್ಟಾಚಾರನೆನುತ ಘೋರ | ಕ

ಷ್ವಕೊಡುವ ಕರ್ಮಗಳನು || ನಿಷ್ಠೆಯಿಂದಲಿ ಜರಗಿಸುತ | ದುಷ್ಟ
ಭವದಲಿ ಮುಳುಗುವರು || ಅನುಪಲ್ಲ || ಪರಮ ಪುರುಷಾರ್ಥವು
ಕರ್ಮದಿಂ | ಪ್ರಾಪ್ತಿಯಾಗದೆಂ | ದೊರೆವ ವೇದಾಂತವನು ಅರಿಯ
ರು || ಅರಿದರೂ ಸಹ ನಂಬಲಾರರು | ವರಭಕ್ತರಿಷ್ಟವ ಕೊಡರು ||
ತ್ವಂದಿ ಜ್ಯೋತಿಷಶಾಸ್ತ್ರ ಛಂದಸ್ಸ | ಅರಿದು ಗರ್ವದಿಂ ಮೆರೆಯುವ
ರು || ೧ || ಜ್ಞಾನಿಗಳ ಪಂಥವನು ಪಿಡಿಯರು | ಆಚಾರರೆನಿಸಿ |
ಸ್ವಾನುಭವದೊಳೊಮ್ಮೆ ಮುಳಗರು || ಆನಂದದಾಯಕ ಶ್ರುತಿಯು |
ಹೀನ ಜಾತಿಯು ಪಶುವಿನ ಸ || ಮಾನವೆಂದು ವೈಧಿಕ ಲೌಕಿಕರು |
ಮಾಣದೆ ನೆರೆ ಹಳಿಯುತಿರಲು || ೨ || ನಿರುತ ಕಾಮ್ಯ ಕರ್ಮವನು
ರೆ | ಮಾಡುತಲಿವರು | ಪರತರಾನಂದವ ಜರಿಯುವರು || ನಿರುಪಮ
ದ್ವಯ ನಿತ್ಯ ನಿಷ್ಕ್ರಿಯ | ಪರಪೂರ್ಣ ಶ್ರೀಗುರು ರಾಮನ | ಹರು
ಷಕೆ ದೂರೆನಿಪರು ನರ | ವರ ಜನ್ಮದೊಳು ಪುಟ್ಟಿ ಇವರು || ೩ ||

ಳಿಲ ನೇ ಪದ.

( ದಾಟ—ಬೋಧಿಸೆನ್ನನು ಗುರುವೆ ಎಂಬಂತೆ. )

ಶೇರಲಾರರು ಮನುಜ | ಹ್ಯಾಗಿದ್ದರೂ | ಪಾರಮಾರ್ಥ ಜ್ಞಾನಿ
ಯನು || ಪಲ್ಲ || ಕ್ರೂರತನದಿ ಮೆರೆವ ಲೌಕಿಕಜನರು ಗಂ| ಭೀರ
ಸುಖದೊಳಿರುವ ಬ್ರಹ್ಮವಿದ್ವರನನು || ಅನುಪಲ್ಲ || ಸ್ವಾನುಭವದೊ
ಳು ಮುಳುಗಿ | ಪರಮಜ್ಞಾನಿ | ಮೌನದಿಂ ಕುಳಿತಿರಲು || ಏನರಿಯ
ದ ಮೂಢನೆಂಬುವರು ಚನ್ನಾಗಿ | ಜ್ಞಾನವನರುಪಲು ಡಾಂಭಿಕನೆಂ
ಬುವರು || ೧ || ತರುಣಿ ಪುತ್ರ ಗೃಹಾದಿ | ವಿಷಯವನು | ವಿರತಿ
ಯಿಂ ತ್ಯಜಿಸಿರಲು || ನೆರೆ ಪ್ರಪಂಚ ಮಾಡಲಾರದ ಸಾಧುವೆಂ| ಬರು
ಗೃಹದೊಳಿರಲು ವಿಷಯೀ ಎಂಬುವರು || ೨ || ಸೊಡರಿನ ಫಲವೇ
ನೆಂಬ | ಚೋರನಪರಿ | ವ್ಯಡರೂಪ ಶ್ರೀರಾಮನ || ಕಡುನಿಂದೆಮಾ
ಡುತ ದುರಿತ ಪರಿಭವವೆಂಬ | ಮಡುವಿನೊಳು ಮುಳುಗಿ ಗಮಿಸು
ವರತ್ತ || ೩ ||

## ೪೯ ನೇ ಪದ.

[ ದಾಟಿ—ಅರೆಮರುಳರಲ್ಲವೆ ಎಂಬಂತೆ. ]

ಸಂತರೆ ಶ್ರೇಷ್ಠರಲ್ಲದೆ ಮತ್ತಾರಿಲ್ಲ | ಅಂತಿಂತೆಬುದು ಪುಸಿಯು ಮತಿಗೇಡಿಗಳು || ಪಲ್ಲ || ಬ್ರಹ್ಮನು ಶ್ರೇಷ್ಠನೆನಲು ವಿಷ್ಣುವಿನ ನಾಭಿ| ಕಮಲದೋಳ್ಪುಟ್ಟಿಹ ಕಮಲ ಶ್ರೇಷ್ಠವೆನಲು || ಸಮುದ್ರದೊಂದೇಕದೇಶ ಭಾಗದಲಿ | ಸಮುದ್ಭವಿಸಿಹುದರಿಂದೆಂತು ಶ್ರೇಷ್ಠವು || ೧ || ಮುಗುಳೆ ಸಮುದ್ರವು ಶ್ರೇಷ್ಠವೆಂದೆನಲು | ಅಗಸ್ತ್ಯನೊಂದು ಶಿರಿ ಮಾಡಿ ಪೀರಿಹನು ಅಗಸ್ತ್ಯಶ್ರೇಷ್ಠನೆನಲು ಕುಂಭದೋಳ್ಪುಟ್ಟಿದರಿಂ| ದಗಸ್ತ್ಯಶ್ರೇಷ್ಠನಲ್ಲ ವಿವರಿಸಿ ನೋಡಲು || ೨ || ಕುಂಭವು ಶ್ರೇಷ್ಠವೆಂದೆನಲು ಒಂದಂಶ| ಕುಂಭಿನಿಯ ಭಾಗದೋಳ್ಪುಟ್ಟಿದ್ದರಿಂದಲ್ಲ || ಕುಂಭಿನಿಯು ಶ್ರೇಷ್ಠವೆಂದೆನಲಾದಿಶೇಷನು | ಒಬ್ಬನೆ ಪೊತ್ತಿದ್ದರಿಂದೆಂತಿದು ಶ್ರೇಷ್ಠವು || ೩ || ಇನ್ನಾದಿ ಶೇಷನು ಶ್ರೇಷ್ಠನೆಂದೆನಲು | ಸನ್ನುತ ಗಣವರನು ಬೆರಳಿಗೆ ಸುತ್ತಿಹ || ಸನ್ನುತ ಗಣವರನು ವರನೆನಲು ಪಾರ್ವತಿಯು ಬೆನ್ನಿನೊಳಗಿನ ಮಣ್ಣಿನಿಂದ ಪುಟ್ಟಿಹನು || ೪ || ಪಾರ್ವತಿಯು ಶ್ರೇಷ್ಠವೆನಲು ಪರಮಾತ್ಮನು | ಸಾರಿ ಯಡಭಾಗದಲ್ಲಿಟ್ಟುಕೊಂಡಿಹನು || ಧೀರ ಪರಮಾತ್ಮನು ಶ್ರೇಷ್ಠನೆನಲಾರೂಢ | ಶ್ರೀರಾಮನ ಹೃದಯದಲ್ಲಿಹುದರಿಂದೆಂತು || ೫ ||

## ೫೦ ನೇ ಪದ.

( ದಾಟಿ—ಜಾತಿ ಸೂತಕವೆಂಬ ಮಾತಿಲ್ಲ ಎಂಬಂತೆ. )

ಪರಬ್ರಹ್ಮವಸ್ತುವಲ್ಲದೆ | ಏನೆಂಬುದಿಲ್ಲ | ಪರಿಕಿಸಿ ನೆರೆಬಗೆದು ನೋಡಲು || ಪಲ್ಲ || ಅರಿವು ಮರವು ಎರಡು ಇಲ್ಲ | ಎರಡರ ಮಿಶ್ರವೆಂಬುವದಿಲ್ಲ || ಹರುಷ ಖೇದಗಳೆಂಬ ಮಾತಿಲ್ಲ | ಪರಿಪೂರ್ಣಬಗೆಯಿಂದ ನೋಡಲು || ಅನುಪಲ್ಲ || ಕಾರ್ಯ ಕಾರಣಭಾವ ರಹಿತ | ಸ್ವಯಂತೇಜನಿ || ಶ್ರೇಯಃಸಾನಂದವಲ್ಲದೆ || ಮಾಯ ಮೋಹಾದಿಗಳು ಇಲ್ಲ | ಜಾಯುಗುಣಗಳೆಂಬುವದಿಲ್ಲ || ಕಾಯ ಕರಣೇಂದ್ರಿಯು

ಗಳಿಲ್ಲ | ಶ್ರೀಯ ದೃಷ್ಟಿಯಿಂದ ನೋಡಲು || ೧ || ಆದಿ ಅಂತ್ಯರಹಿತ ಸದ್ರೂಪ | ಚಿದಖಂಡರೂಪ | ಬೋಧವ[illegible] ಆತ್ಮನು ಅಲ್ಲದೆ || ವಾದ ವರ್ಣಾದಿ ಗುಣಗಳಿಲ್ಲ | ನಾದಬಿಂದ[illegible]ರೆಗಳಿಲ್ಲ | ಭೇದಕಲ್ಪ ನೆಂಬು ಮಾತಿಲ್ಲ | ಶೋಧನೆಯನು ಮಾಡಿ [illegible]ೋಡಲು || ೨ || ಕ ದಿದು ತೋರುವ ಸ್ವರ್ಗ ನರಕಿಲ್ಲ | ಮೋ[illegible]ಲ್ಲ ಪುಣ್ಯಪಾ| ಪದ ಸ ಮೂಹ ವೆಂಬುವದು || ಐದು ಮಹಾಭೂತ[illegible] ಇಲ್ಲ | ಪದಿನಾ ಲ್ಕು ಲೋಕೆಂಬು ವಾಸಿಲ್ಲ || ಮೊದಲಿಲ್ಲೆಂಭ[illegible]ಲ್ಕು ಲಕ್ಷಜೀವ | ಸದಮಳ ಜ್ಞಾನದಿಂದ ನೋಡಲು || ೩ || [illegible]ಘ ನಿರ್ಗುಣ ಅವಯ ವ ರಹಿತ | ನಿಸ್ತತ್ವ ನಿರ್ಮಲ | ನಿರುಪಮ [illegible]ಸ್ತೊಂದೆ ಅಲ್ಲದೆ || ಗು ರುವೇದಾದಿ ಸಮೂಹವಿಲ್ಲ | ಪರಿಭವದ [illegible]ಧೆ ಮೊದಲಿಲ್ಲ || ಹರು ಷವೆನಿಪ ಮೋಕ್ಷವೆಂಬುದಿಲ್ಲ | ಪರಮ ಸುಜ್ಞಾನದಿಂದ ನೋಡಲು || ೪ || ನಿರವಧಿ ಸುಖರೂಪ ನೆನಿಪ | ಪರಮಾರೂಢ | ಗುರುರಾಮ ನೋರ್ವನಲ್ಲದೆ || ಹರಹರಿ ಬ್ರಹ್ಮಾದಿಗಳಿಲ್ಲ | ಕುರುಹಿಲ್ಲಂತಿಂತೇ ನು ಇಲ್ಲ || ಪರಬೊಮ್ಮೆಂಬ ನಾಮವೇ ಇಲ್ಲ | ಅರಿದು ನೋಡಲಿ ಲ್ಲೆಂಬುದಿಲ್ಲ || ೫ ||

## ೫೧ ನೇ ಪದ.

( ದಾಟಿ—ಭಜನೆಯನು ಮಾಡಿರೊ ಎಂಬಂತೆ. )

ಜೋತಿ ಬೆಳಗುತಿದೆ ಜೈ| ತನ್ಮಯರೂಪ | ಗಾತ್ರರಿಗೆ ತೋರು ತಿದೆ || ಪಲ್ಲ || ಪಾತಾಳಾದಿ ಲೋಕದೊಳಗೆಲ್ಲ ಕೀವಿದ | ಶಾಂತರೂ ಪ ಷಟ್ಪ್ರಮಾಣಾತೀತವಾದ || ಅನುಪಲ್ಲ || ನಿರತಿಶಯ ನಿರೂಪ | ನಿರುಪಾಧಿ | ನಿರವಧಿ ನಿರಲೇಪ || ನಿರಘ ನಿರ್ಗುಣ ನಿರ್ವಿಕಾರ ನಿ ರ್ಮಲರೂಪ | ನಿರುಪಮನಿರಂಜನ ಪರಿಪೂರ್ಣರೂಪ || ೧ || ನಿರಾ ಲಂಬ ನಿರಾಕಾರ ನಿರಾಧಾರ | ನಿರಾಳ ನಿರಾಧಾರ || ನಿರಾವರಣ ನಿರ್ವಿಶ್ನೆಯ ಸರ್ವಾಧಾರ | ಶರೀರಾದಿಗಳಿಗೆಲ್ಲ ಪ್ರಕಾಶಿಪಧೀರ || ೨ || ಬರಿದೆ ತೋರುವ ಮಾಯದ | ಕಲ್ಪನೆಯನು | ನಿರಂತರ ಬೆರೆಯು

ಪ || ಪರಮ ಶ್ರೀಮತ್ಸದ್ಗುರು ರಾಮಾರೂಢರ | ನಿರುಪಮ ಕರುಣ ವಾರಿಧಿಯೆ ತಾನಾದ || ೩ ||

## ೫೨ ನೇ ಪದ.

( ದಾಟಿ—ಜಯ ಜಯ ಮಂಗಳಮಯ ಎಂಬಂತೆ. )

ಜಯ ಜಯ ಸತ್ಯಜ್ಞಾನ ಸುಖಾತ್ಮಗೆ | ಜಯಜಯ ನಿತ್ಯಪರಿಪೂರ್ಣರೂಪಗೆ | ಜಯಜಯ ಶಾಂತಗೆ ದಾಂತಗೆ ಕಾಂತಗೆ ಶ್ರೀಗುರುವರನಿಗೆ || ಪಲ್ಲ || ಸಕಲಸಾಧನ ಸಂಪದ್ಯುಕ್ತಗೆ | ಯುಕುತಿ ಅನುಮಾನನು ಭವವರ ಶ್ರುತಿ | ನಿಕರದಿ ಮಕಲಂಕ ಬ್ರಹ್ಮರೂಪವೃತ್ವಮೆಂದು ಬೋಧಿಪಗೆ || ಅಕಲಂಕ ಗಾತ್ರನೆ ಭವಕೆ ಛೈತ್ರನೆ | ಸುಕರಣ ಸೂತ್ರನೆ ವರಗುಣ ಚೈತ್ರನೆ || ವಿಕಲ್ಪರಹಿತ ನೆಂದ್ಯೆದೆ ನುತಿಪ ಶಿಷ್ಯನ ಭವನಾಶಗೆ || ೧ || ಸದಮಲರೂಪನೆ ಮುದದಿಂ ಪೊರೆಯೆಂದು | ಪದುಳವಾದ ಪಾದಕಂಜಕೆ ಮರೆಹೊಕ್ಕ | ಸದಿಚ್ಛೆವಂತರ ತನ್ನಂತೆ ತೋರಿಪಧೀರಗೆ ಶೂರನಿಗೆ || ಐದುಕೋಶವ ಭೇದಿಸಿ ಛೇದಿಸಿ | ಐದೆ ಸರ್ವಕೆ ಸಾಕ್ಷಿಯೆಂದು ಬೋಧಿ || ಸೈದು ಭೇದಗಳೈದೆ ಪರಿಹರಿಸದ್ವಯ ಮಾಡುವಗೆ || ೨ || ಮರಳಿ ಒದಗುವ ತ್ರಿಸಂಶಯಗಳ | ಜರಿಸಿ ತ್ರಯ ಪ್ರತಿಬಂಧವ ನಾಶಿಸಿ | ಸರಸದಿಂ ವಾಕ್ಯಾರ್ಥ ಪ್ರತಿಪತ್ತಿಯ ನಿರಾಕರಿಸುವವಗೆ || ಹರಿಯವತಾರ ವೆನಿಸಿ ಜಗದೊಳಗೆ | ಪರಮ ಸುಜ್ಞಾನದಿಂದಲಿ ಮೆರೆಯುವ | ನಿರುಪಮ ಸ್ವಯಪ್ರಕಾಶ ಶ್ರೀಗುರು ರಾಮಾರೂಢರಿಗೆ || ೩ ||

ಶ್ರೀ ಮತ್ಸಚ್ಚಿದಾನಂದ ಸಂಯಮಿ ಶಿಖಾಮಣಿ ಶ್ರೀಯುತ
ಪರಮಹಂಸ ಸದ್ಗುರು ರಾಮಾರೂಢರ ಪೂಜ್ಯಪಾದ
ಶಿಷ್ಯ ಶ್ರೀಗುರು ಸಂಗಮೇಶ್ವರ ಕವಿಗಳಿಂದ ಮುಮುಕ್ಷು
ಜನಹಿತಾರ್ಥವಾಗಿ ವಿರಚಿಸಲ್ಪಟ್ಟ ಕೈವಲ್ಯ
ಪದ್ಧತಿಯು ಸಮಾಪ್ತಮಾದುದು.

ಇತಿ ಶುಭಮಸ್ತು.

